# ರಾಗೌ ಅವರ ಬದುಕು ಬರಹ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)

ಸಂಶೋಧಕರು

**ಕುಮಾರಿ॥ ಹೆಚ್. ಆರ್.ಶಿಲ್ಪ**



ಮಾರ್ಗದರ್ಶಕರು

**ಡಾ॥ ಬೋರೇಗೌಡ ಚಿಕ್ಕಮರಳಿ**



**ಕರ್ನಾಟಕ ಸಂಘ (ರಿ), ಮಂಡ್ಯ**

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೯-೧೦

# ರಾಗೌ ಅವರ ಬದುಕು ಬರಹ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)

ಸಂಶೋಧಕರು

**ಕುಮಾರಿ॥ ಹೆಚ್. ಆರ್.ಶಿಲ್ಪ**



ಮಾರ್ಗದರ್ಶಕರು

**ಡಾ॥ ಬೋರೇಗೌಡ ಚಿಕ್ಕಮರಳಿ**



**ಕರ್ನಾಟಕ ಸಂಘ (ರಿ), ಮಂಡ್ಯ**

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೯-೧೦



874A

# ಮಾರ್ಗದರ್ಶಕರ ಪ್ರಮಾಣ ಪತ್ರ

ಕುಮಾರಿ॥ಹೆಚ್.ಆರ್.ಶಿಲ್ಪ ಅವರು ಕನ್ನಡ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ "ರಾಗೌ ಅವರ ಬದುಕು ಬರಹ" ಎಂಬ ನಿಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ. ಪಡೆದಿರುವ ಮಂಡ್ಯದ ಕರ್ನಾಟಕ ಸಂಘದ ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಈ ಸಂಶೋಧನಾ ಕಾರ್ಯವನ್ನು ಕೈಗೊಂಡಿದ್ದಾರೆ. ಇದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ॥ ಬೋರೇಗೌಡ ಚಿಕ್ಕಮರಳಿ)
ಆಯ್ಕೆ ಶ್ರೇಣಿ ಕನ್ನಡ ಪ್ರಾಧ್ಯಪಕರು
ವಿಜಯ ಪ್ರಥಮ ದರ್ಜೆ ಕಾಲೇಜು
ಪಾಂಡವಪುರ.

ದಿನಾಂಕ :24-8-2010

# ಸಂಶೋಧಕರ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೯-೧೦ ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ರಾಗೌ ಅವರ ಬದುಕು ಬರಹ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ॥ ಬೋರೇಗೌಡ ಚಿಕ್ಕಮರಳಿ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

H.R. Shilpa
ಅಭ್ಯರ್ಥಿಯ ಸಹಿ

ದಿನಾಂಕ : 24-8-2010

# ರಾಗೌ ಅವರ ಬದುಕು ಬರಹ

## ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸೃಜನಾತ್ಮಕ ಹಾಗೂ ವಿಮರ್ಶಾತ್ಮಕ ಶಕ್ತಿಗಳು ಮನುಷ್ಯನಲ್ಲಿ ಸದಾಕಾಲ ಜಾಗೃತವಾಗಿ ಇರುತ್ತದೆ. ವ್ಯಕ್ತಿಯ ಕಾರ್ಯಶೀಲತೆ, ಸಾಧನೆ ಹಾಗೂ ಸಿದ್ಧಿಗಳಿಗೆ ಅನುಗುಣವಾಗಿ ಕವಿ, ವಿಮರ್ಶಕ, ಸಂಶೋಧಕ ಮತ್ತು ಸಂಪಾದಕ ಮುಂತಾದ ನಾಮಧೇಯಗಳಿಂದ ಕೆಲವರನ್ನು ಕರೆಯುತ್ತಿರುತ್ತೇವೆ. ಸಾಮಾನ್ಯವಾಗಿ ವಿವಿಧತೆಯಲ್ಲೂ ಸಾಫಲ್ಯ ಹೊಂದುವಂತೆ ರೂಪುಗೊಳ್ಳುವ ಜಾಣ್ಮೆ ಕೆಲವರಲ್ಲಿ ಮಾತ್ರ ಕಂಡು ಬರುತ್ತದೆ. ಇಂತಹ ಪ್ರತಿಭೆಯನ್ನು ಗಿಟ್ಟಿಸಿ ಕೊಂಡವರಲ್ಲಿ ಡಾ॥ರಾಗೌರವರು ಒಬ್ಬರು.

ಡಾ॥ ರಾಗೌ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಚಿಂತನೆಯ ಸಂದರ್ಭದಲ್ಲಿ ಒಂದು ಮುಖ್ಯವಾದ ಹೆಸರು. ಅಚ್ಚರಿಗೊಳಿಸುವಷ್ಟು ಸಾಹಿತ್ಯ ರಚನೆ ನಿರ್ಮಾಣ ಮಾಡಿದ ಇವರು, ವಿಶೇಷ ವುತ್ಪತ್ತಿ, ಸ್ತುತ್ಯ ಪ್ರತಿಭೆ ಎರಡಕ್ಕೂ ಇವರು ಸಿದ್ಧ ಹಸ್ತರು, ಸೃಜನಶೀಲ ಹಾಗೂ ಸೃಜನೇತರ ಎರಡು ಕ್ಷೇತ್ರಗಳಲ್ಲಿ ಇವರು ಕಾರ್ಯಮಾಡಿದ್ದಾರೆ. ಇವರ ಕೃಷಿ ಬಹುಮುಖವಾದುದು ಉದಾಹರಣೆಗೆ ಸಂಶೋಧನೆ ವಿಮರ್ಶೆ, ಗ್ರಂಥ ಸಂಪಾದನೆ, ಕಾವ್ಯ, ನಾಟಕ ಹಾಗೂ ಮಕ್ಕಳ ಸಾಹಿತ್ಯ.

ಇಂತಹ ಹಿರಿಯ ಲೇಖಕರನ್ನು ಹಾಗೂ ಅವರ ಸಾಹಿತ್ಯ ಕೃಷಿಯನ್ನು ಕುರಿತು ಅವಲೋಕಿಸುವ ಪ್ರಯತ್ನವೇ ಈ ನಿಬಂಧ ರಚನೆಯಾಗಿದೆ. ಯಾವುದೇ ಒಂದು ವಿಷಯದ ಅಧ್ಯಯನಕ್ಕೆ ನಾವು ತೊಡಗುವ ಮೊದಲು ಆ ವಸ್ತುವಿನ ಬಗೆಗೆ ನಮ್ಮಲ್ಲಿ ಒಲವು ಅಥವಾ ಅಭಿರುಚಿ ಇದ್ದಾಗ ಮಾತ್ರ ನಾವು ಆಯ್ಕೆ ಮಾಡಿ ಕೊಂಡಿರುವ ವಿಷಯದಲ್ಲಿ ತಲ್ಲೀನರಾಗಿ, ನಮ್ಮ ಸಂವೇದನಾಶೀಲತೆ ಮಟ್ಟಿಗೆ ಅವನ್ನು ವಿಶ್ಲೇಷಿಸಲು ಸಾಧ್ಯ.

ಪ್ರಸ್ತುತ ಈ ಪ್ರಯತ್ನದಲ್ಲಿ ಎಂಟು ಅಧ್ಯಾಯಗಳನ್ನು ಮಾಡಿಕೊಂಡಿದ್ದು, ಒಂದನೇ ಅಧ್ಯಾಯದಲ್ಲಿ ರಾಗೌರವರ ಜೀವನ ಮತ್ತು ವ್ಯಕ್ತಿತ್ವಕ್ಕೆ ಕುರಿತ ಸಮಸ್ತ ವಿಚಾರಗಳನ್ನು ಪ್ರಸ್ತಾಪ ಮಾಡಲಾಗಿದೆ. ರಾಗೌ ಅವರ ಬಾಲ್ಯ ಜೀವನ, ವಿದ್ಯಾಭ್ಯಾಸ, ಕನ್ನಡ ಅಧ್ಯಾಪಕರಾಗಿ ಅವರ ಪ್ರಾಮಾಣಿಕ ಸೇವೆ. ಅವರ ಬಹು ಶಿಸ್ತೀಯ ಅಧ್ಯಯನ, ನಿವೃತ್ತಿ ನಂತರದ ಕಾರ್ಯ ಚಟುವಟಿಕೆ ಹಾಗೂ ಸಾಹಿತ್ಯ ಕೃಷಿಗಾಗಿ ಅವರಿಗೆ ದೊರೆತ ಅಪಾರ ಪ್ರಶಸ್ತಿ, ಬಿರುದುಬಾವಲಿಗಳನ್ನು ಕುರಿತಂತೆ ಚರ್ಚಿಸಲಾಗಿದೆ.

ಎರಡನೇಯ ಅಧ್ಯಾಯನದಲ್ಲಿ ಸೃಜಲಶೀಲ ಕೃತಿಗಳನ್ನು ಕುರಿತು ವಿವೇಚಿಸಲಾಗಿದೆ. ಯಾತ್ರೆ, ತೆಪ್ಪ, ಮೋಡ ಮುಸುಕಿದ ಆಕಾಶ, ನೆಲದ ಮರೆಯ ನಿಧಾನ, ಮಾತು ಮೌನಗಳ ನಡುವೆ, ಆರದಿರಲಿ ಈ ಬೆಳಕು, ಮಾತು ಮಾರ್ಗ, ಅನಾಗತ ಮುಂತಾದ ಕಾವ್ಯಗಳನ್ನು ಹಾಗೂ ದೊರೆ ದುರ್ಯೋಧನ ನಾಟಕ ಕುರಿತು ವಿಶ್ಲೇಷಿಸಲಾಗಿದೆ. ರಾಗೌ ಅವರ ಕಾವ್ಯ, ನಾಟಕಗಳನ್ನು ಕುರಿತಂತೆ ಒಳವುಗಳನ್ನು ಚರ್ಚಿಸಿ ಕವಿ ಪ್ರತಿಭೆಯನ್ನು ಗುರುತಿಸುವ ಪ್ರಯತ್ನ ನಡೆದಿದೆ. ಮೂರನೇಯ ಅಧ್ಯಾಯನದಲ್ಲಿ ವಿಮರ್ಶಾ ಕೃತಿಗಳಾದ ರಾಘವಾಂಕ, ಕಾವ್ಯಾನುಶೀಲನ, ಅವಗಾಹನ ಕುವೆಂಪು ಸಾಹಿತ್ಯ ವಿಮರ್ಶನ, ದುರ್ಗಸಿಂಹ, ಪ್ರಾಸ್ತಾವಿಕ; ಸಮಾಕೀರ್ಣ, ಕೆ.ಎಸ್. ನರಸಿಂಹಸ್ವಾಮಿ, ಬಿ.ಎಂ.ಶ್ರೀಕಂಠಯ್ಯ ಮತ್ತು ಪ್ರಾಚೀನ ಕಾವ್ಯ ಚಿಂತನೆ ಕುರಿತಂತೆ ವಿಮರ್ಶಕರಾಗಿ ರಾಗೌ ಅವರನ್ನು ನೋಡುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೇಯ ಅಧ್ಯಾಯದಲ್ಲಿ ಸಂಶೋಧನಾ ಕೃತಿಗಳ ಪಷ್ಟಿಸಂಪದ ಮತ್ತು ಸಂಶೋಧನ ಮಹಾಪ್ರಬಂಧವಾದ 'ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು' ಇವುಗಳ ವ್ಯಾಪ್ತಿ ಹಾಗೂ ಒಳನೋಟವನ್ನು ಚರ್ಚಿಸಲಾಗಿದೆ. ಐದನೇಯ ಅಧ್ಯಾಯದಲ್ಲಿ ರಾಗೌ ಅವರು ಜಾನಪದ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳು ಅವುಗಳ ವಿಸ್ತಾರವಾದ ವಿವೇಚನೆಯನ್ನು

ಮಾಡಲಾಗಿದೆ.ಆರನೇಯ ಅಧ್ಯಾಯದಲ್ಲಿ ರಾಗೌ ಅವರ ಶ್ರದ್ಧಾ ಪೂರ್ವಕ ಹಾಗೂ ಪ್ರಾಮಾಣಿಕ ಪ್ರಯತ್ನದ ಫಲವಾಗಿ ಹೊರ ಬಂದ ಗ್ರಂಥ ಸಂಪಾದಿತ ಕೃತಿಗಳಿಂದ ಸಾಹಸ ಭೀಮ ವಿಜಯ, ಅಜಿತ ತೀರ್ಥಕರ ಪುರಾಣಂ, ಲ್ಕಕ್ಷ್ಮಿಶನ ಜೈಮಿನಿಭಾರತ ಮತ್ತು ಸರ್ವಜ್ಞನ ವಚನಗಳು ಇವುಗಳನ್ನು ಕುರಿತು ವಿವರಿಸಲಾಗಿದೆ. ಏಳನೇಯ ಅಧ್ಯಾಯದಲ್ಲಿ ರಾಗೌ ಅವರ ಸಂಪಾದಿತ ಕೃತಿಗಳಿಂದ ಬಿ.ಎಂ.ಶ್ರೀ ನೂರರನೆನಪು, ಕೈಲಾಸಂ ಬದುಕುಬರಹ, ವಿನಯೋನ್ನತಿ, ಮಹಿಳಾ ಅಧ್ಯಯನದ ಆಯಾಮ ಮುಂತಾದ ಒಂಬತ್ತು ಕೃತಿಗಳ ಬಗ್ಗೆ ತರ್ಕಿಸಲಾಗಿದೆ.

ಎಂಟನೆಯ ಅಧ್ಯಾಯಲ್ಲಿ ಕುಮಾರರಾಮ,ಕಂದನ ಕವನಗಳು,ಆರು ಪ್ರಾಣಿಕಥೆಗಳು ಎಂಬ ರಾಗೌ ಅವರ ಮಕ್ಕಳ ಸಾಹಿತ್ಯ ಕುರಿತಂತೆ ಪ್ರಶಂಸೆಯನ್ನು ವ್ಯಕ್ತಪಡಿಸಲಾಗಿದೆ. ಕಡೆಯದಾಗಿ ಉಪಸಂಹಾರವನ್ನು ನೀಡಲಾಗಿದೆ.ಅನುಬಂಧದಲ್ಲಿ ಗ್ರಂಥಋಣ ಮತ್ತು ರಾಗೌ ಅವರ ಕೃತಿಗಳನ್ನು ಉಲ್ಲೇಖಿಸಲಾಗಿದೆ.

# ಅಧ್ಯಾಯ-೧

## ಜೀವನ ಮತ್ತು ವ್ಯಕ್ತಿತ್ವ

ಡಾ॥ ರಾಗೌ ಕನ್ನಡ ಸಾಹಿತ್ಯ ಸಂಸ್ಕೃತಿಯ ಚಿಂತನೆಯಲ್ಲಿ ಒಂದು ಮುಖ್ಯವಾದ ಹೆಸರು. ಇಲ್ಲಿಯವರೆಗೂ ಕ್ರಿಯಾಶೀಲರಾಗಿರುವ ಅವರು ೫೨ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ ಕಾವ್ಯ ನಾಟಕಗಳು,ವಿಮರ್ಶೆಗಳು, ಸಂಶೋಧನೆಗಳು, ಶಿಶು ಸಾಹಿತ್ಯಗಳು ಸಾಹಿತ್ಯ ಲೋಕಕ್ಕೆ ಅಪಾರ ಕೊಡುಗೆಗಳಾಗಿವೆ. ೩೭ ಕ್ಕೂ ಹೆಚ್ಚು ವರ್ಷ ಅಧ್ಯಾಪಕ ವೃತ್ತಿಯನ್ನು ಮುಗಿಸಿದ ಸದಾ ಚಟುವಟಿಕೆಯ ವ್ಯಕ್ತಿ.

ಸಾಮಾನ್ಯ ಹಳ್ಳಿಯ ರೈತ ಕುಟುಂಬದಲ್ಲಿ ೧೯೪೨ ರ ಎಪ್ರಿಲ್ ೩ ರಂದು ಅವರ ಜನನ. ಮಂಡ್ಯ ಜಿಲ್ಲೆ ಮದ್ದೂರು ತಾಲೂಕಿನ ಈರೇಗೌಡನ ದೊಡ್ಡಿ ಅವರ ಊರು. ತಂದೆ ಮಾಸ್ತಿಗೌಡ, ತಾಯಿ ನಿಂಗಮ್ಮ ಇವರ ಕಾವ್ಯನಾಮ 'ರಾಗೌ' ಕಡು ಬಡತನದ ಅವಿಭಕ್ತ ಕುಟುಂಬದಲ್ಲಿ ಜನಿಸಿದ ಇವರು ಹುಟ್ಟಿದ ಒಂದು ವರ್ಷದೊಳಗೆ ತಾಯಿಯನ್ನು, ಒಂಬತ್ತು ವರ್ಷದೊಳಗೆ ತಂದೆಯನ್ನು ಕಳೆದು ಕೊಂಡರು ಅವರ ದೊಡ್ಡಪ್ಪ ಮತ್ತು ಚಿಕ್ಕಪ್ಪಂದಿರ ಆಶ್ರಯದಲ್ಲಿ ಬೆಳೆದರು.

ರಾಗೌ ಅವರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಬೆಸಗರ ಹಳ್ಳಿಯಲ್ಲಿ ನಡೆಯಿತು. ಮದ್ದೂರಿನಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿದರು. ತಂದೆ ತಾಯಿಯನ್ನು ಕಳೆದು ಕೊಂಡಿದ್ದ ರಾಗೌಅವರ ವಿದ್ಯಾಭ್ಯಾಸಕ್ಕೆ ದೊಡ್ಡಪ್ಪ-ನೀಲೇಗೌಡ,ಚಿಕ್ಕಪ್ಪ ತಮ್ಮೇಗೌಡ,ವೆಂಕಟಪ್ಪ ಚಿಕ್ಕ ಮೊಗೇಗೌಡರು ನೀರೆರೆದು ಗುರುಗಳಾದ ರಾಮಣ್ಣನವರು ಸಹ ಬೆನ್ನುತಟ್ಟಿ ಪ್ರೋತ್ಸಾಹಿಸಿದರು ೧೯೫೯ ರಲ್ಲಿ ತಮ್ಮ ಪ್ರೌಢಶಾಲಾ ಶಿಕ್ಷಣವನ್ನು ಪ್ರಥಮ ದರ್ಜೆಯೊಂದಿಗೆ ಮುಗಿಸಿದರು. ರಾಗೌ ಅವರ ದೊಡ್ಡಪ್ಪ ಚಿಕ್ಕಪ್ಪಂದಿರಿಗೆ ಮಗನನ್ನು

ಇಂಜಿನಿಯರ್ ಮಾಡುವ ಕನಸಿತ್ತು. ಪದವಿ ಪೂರ್ವ ಶಿಕ್ಷಣವನ್ನು ಮೈಸೂರಿನ ಯುವರಾಜ ಕಾಲೇಜಿನಲ್ಲಿ ವಿಜ್ಞಾನ ವಿಷಯದಲ್ಲಿ ಪಡೆದರು. ಇಂಜಿನಿಯರ್ ಸೀಟು ಸಿಕ್ಕಿದರು. ಸಹ ಅಂತರಂಗದಲ್ಲಿ ಕನ್ನಡ ವಿಷಯ ಅಧ್ಯಾಯನ ಮಾಡಬೇಕೆಂಬ ಮೊಳಕೆಯ ಪೈರು ಬೆಳೆದು ನಿಂತಿತ್ತು. ಪದವಿಯಲ್ಲಿ ಕನ್ನಡವನ್ನು ಪ್ರಧಾನ ವಿಷಯವಾಗಿ ಮತ್ತು ಭಾಷಾ ವಿಜ್ಞಾನವನ್ನು ಅಧೀನ ವಿಷಯವಾಗಿ ಓದಲು ಮಹಾರಾಜ ಕಾಲೇಜಿನಲ್ಲಿ ಪ್ರವೇಶ ಪಡೆದರು.

ರಾಗೌ ಅವರಿಗೆ ಕಾಲೇಜು ದಿನಗಳಲ್ಲಿಯೇ ಕವಿತೆ ಬರೆಯುವ ಅಭ್ಯಾಸವಿತ್ತು. ಗೀತಾಂಜಲಿಯಿಂದ ಅನುವಾದಿಸಿದ 'ಬದುಕು ಮತ್ತು ಸಾವು', 'ಮುಳುಗು ಮನವೆ' ಮೊದಲಾದ ಕವಿತೆಗಳು ಕಾಲೇಜು ಮ್ಯಾಗಜೀನ್‌ನಲ್ಲಿ ಪ್ರಕಟವಾಗಿದ್ದವು. ಕುವೆಂಪು, ಕಾರಂತರ,ಟ್ಯಾಗೋರರ ಸಾಹಿತ್ಯ ಕೃತಿಗಳು ರಾಗೌಅವರ ಸಾಹಿತ್ಯವನ್ನು ಪ್ರೋತ್ಸಾಹಿಸಿದ್ದವು.

೧೯೬೩ ರಲ್ಲಿ ಬಿ.ಎ ಪದವಿಯನ್ನು ಮುಗಿಸಿ ಎಂ.ಎ ಕನ್ನಡ ಸ್ನಾತಕೋತ್ತರ ಪದವಿಯನ್ನು ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಪಡೆದರು. ಎಂ.ಎ ಸ್ನಾತಕೋತ್ತರ ಪದವಿಯನ್ನು ಮೊದಲ ರ್‍ಯಾಂಕ್ ಮತ್ತು ಚಿನ್ನದ ಪದಕದೊಂದಿಗೆ ಪಡೆದಿದ್ದಾರೆ.

ಸ್ನಾತಕೋತ್ತರ ಪದವಿಯ ವಿದ್ಯಾಭ್ಯಾಸದ ಅವಧಿಯಲ್ಲಿ ಅವರು ಬರೆದ 'ನನಗೆ' ಎಂಬ ಕವನವು 'ಲಹರಿ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ತರಗತಿಗೆ ಒಂದು ದಿನವೂ ರಜೆ ಹಾಕಿದವರಲ್ಲಾ ಅವರು ಅಂದಿನ ಕಾಲದಲ್ಲಿ ಬರೆದ ವಿಮರ್ಶೆ, ಸಂಶೋಧನಾ ಪ್ರಬಂಧಗಳು ಪ್ರಾಧ್ಯಾಪಕರ ಮೆಚ್ಚುಗೆ ಪಡೆದು 'ಪ್ರಬುದ್ಧ ಕರ್ಣಾಟಕ' ದಲ್ಲಿ ಪ್ರಕಟವಾಗಿದ್ದವು. ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳ ಮೇಲೆ ಲೇಖನಗಳನ್ನು ಸಹ ಬರೆದಿದ್ದರು.

ರಾಗೌ ಅವರು ಎಂದು ಕೂಡ ಅಧಿಕಾರ, ಪದವಿ, ಪುರಸ್ಕಾರಗಳಿಗೆ ಮಾರು ಹೋದವರಲ್ಲಿ ಹಾಗೂ ಪ್ರಚಾರದ ಹಿಂದೆ ಬಿದ್ದವರೂ ಅಲ್ಲ ಅಥವಾ ಅದಕ್ಕೋಸ್ಕರ ಲಾಬಿ ನಡೆಸುವಂತಹ ಮನೋಧರ್ಮವನ್ನು ರೂಢಿಸಿ ಕೊಂಡವರೂ ಅಲ್ಲ, ಜಾನಪದ ಮತ್ತು ಸೃಜನಶೀಲ ಸಾಹಿತ್ಯದ ಬೇರೆ ಬೇರೆ ನೆಲೆಗಳಲ್ಲಿ ಕೆಲಸ ಮಾಡಿರುವ ಇವರು ಈಗಾಗಲೇ ವಿಶ್ವ ವಿದ್ಯಾನಿಲಯ ಮತ್ತು ಸರ್ಕಾರದ ವಿವಿಧ ಅಕಾಡೆಮಿಗಳಲ್ಲಿ ಗುರುತರವಾದ ಸ್ಥಾನವನ್ನು ಅಲಂಕರಿಸಬೇಕಾಗಿತ್ತು. ಆದರೆ ವ್ಯವಸ್ಥೆಯೊಳಗೆ ಲಾಬಿತನ ಮತ್ತು ಗುಲಾಮಿ ಸಂಸ್ಕೃತಿಗಳು ತಾಂಡವವಾಡುತ್ತಿರುವುದರಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದ್ಧತೆಯ ಅಡಿಯಲ್ಲಿ ಮೌಲ್ಯಧಾರಿತ ಜೀವನ ನಡೆಸುತ್ತಿರುವ ರಾಗೌ ಅವರು ಮೂಲಭೂತವಾಗಿ ಇಂತಹ ಸ್ಥಾನಮಾನಗಳಿಂದ ಬಹಳಷ್ಟು ದೂರ ಉಳಿದಿದ್ದಾರೆ.

ಡಾ.ರಾಗೌ ಅವರು ಸರಳ-ಸಜ್ಜನಿಕೆಯ ವ್ಯಕ್ತಿ ಅಧ್ಯಾಪಕರಾಗಿ ಅವರು ಆದರ್ಶ ಪ್ರಾಯರೂ, ಅನುಕರಣೀಯರೂ ಆಗಿದ್ದಾರೆ. ಅಧ್ಯಾಪಕ ವೃತ್ತಿಯನ್ನು ಬಹಳ ಗೌರವಿಸುವವರೂ, ಪ್ರೀತಿಸುವವರೂ ಆಗಿದ್ದಾರೆ. ಬಹಳ ಸಂಕೋಚ ಪ್ರವೃತ್ತಿಯವರಾಗಿರುವುದರಿಂದಲೋ ಏನೋ ಎಲೆ ಮರೆಯಕಾಯಿನಂತೆ ಯಾವುದೇ ಅಧಿಕಾರ ಅಂತಸ್ತುಗಳಿಗೆ ಆಶಿಸದೆ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿಕೊಂಡು ಹೋಗುತ್ತಾರೆ. ಇವರು ದೊಡ್ಡಗುಣವೆಂದರೆ ನಿಧಾನ ಮತ್ತು ತಾಳ್ಮೆ. ಇವರು ತುಂಬಿದ ತೊರೆ ಇದ್ದ ಹಾಗೆ ಗುರು ಹಿರಿಯರಲ್ಲಿ ಗೌರವ, ಸಮಕಾಲೀನರಲ್ಲಿ ವಿಶ್ವಾಸ ಪೂರ್ಣ ಮೈತ್ರಿಭಾವ, ಹಾಗೆಯೇ ಕಿರಿಯರಲ್ಲಿ ಪ್ರೀತಿ ವಾತ್ಸಲ್ಯವುಳ್ಳವರು.

ರಾಗೌ ಅವರ ಬಂಧುತ್ವದ ಎಳೆಗಳು ಕೇವಲ ಕೌಟುಂಬಿಕ ಸಂಬಂಧಗಳಿಗಷ್ಟೇ ಸೀಮಿತವಾಗಿಲ್ಲ ತಮ್ಮ ಸಂಪರ್ಕಕ್ಕೆ ಬರುವ ವಿದ್ಯಾರ್ಥಿಗಳು ಸಹೋದ್ಯೋಗಿಗಳು, ಮಿತ್ರರು ಸೇರಿದಂತೆ ಎಲ್ಲ ಬಗೆಯ ಜನರೊಡನೆ ಉತ್ತಮ ಸಂಬಂಧವನ್ನು ಇರಿಸಿಕೊಳ್ಳಲು ಅವರು

ಹವಣಿಸುತ್ತಾರೆ. ನನ್ನಿಂದ ಯಾರಿಗೂ ತೊಂದರೆಯಾಗಬಾರದು. ಯಾರ ಮನಸ್ಸನ್ನೂ ನೋಯಿಸಬಾರದು ಸಾಧ್ಯವಾದರೆ ಕೈಲಾದ ನೆರವು ನೀಡಬೇಕು. ಇಲ್ಲವೇ ಎಲ್ಲರಿಗೂ ಒಳ್ಳೆಯದಾಗಲಿ ಎಂದು ದೂರದಿಂದಲೇ ಹಾರೈಸಬೇಕು ಇತ್ಯಾದಿ ಶುಭಾಶಂಸೆಗಳ ಅವರ ಮನೋಭಾವಕ್ಕೆ ಅವರು ಬೆಳೆದು ಬಂದ ಬದುಕಿನ ಬಗೆ ಕಾರಣವಾಗಿದೆ. ಅವರ ಕವಿತೆಗಳಲ್ಲಿ ನಾಟಕದಲ್ಲಿ ಶೋಷಿತ ಜನರ ಹೆಣ್ಣು ಮಕ್ಕಳ ಚಿತ್ರಣಗಳಿವೆ. ಶೋಷಿತರ ಪರವಾದ ನಿಲುವುಗಳಿವೆ ಅವಾವುವೂ ಆಕ್ರೋಷದ ಮಟ್ಟಕ್ಕೆ ಏರುವುದಿಲ್ಲ, ಮೆಲುದನಿಯ ಪ್ರತಿಭಟನೆಯನ್ನು ಮರೆಯುವುದಿಲ್ಲ ಈ ಸಂಯಮ, ಆಲೋಚನಾಪರತೆ ಅವರದು ಇವೆಲ್ಲವೂ ಮಣ್ಣಿನ ಬದುಕಿನ ಬವಣೆ, ಸ್ವೀಕರಣ ಭಾವ, ಅಪ್ಪಿಕೊಳ್ಳುವ ಗುಣಗಳ ಫಲ ಕವಿ ವಿದ್ವಾಂಸ, ವಿಮರ್ಶಕ, ಚಿಂತಕ ಏನೆಲ್ಲಾ ಆಗಿದ್ದರೂ ಇಂದಿಗೂ ರಾಗೌ ಅವರಲ್ಲಿರುವುದು ಗ್ರಾಮ ಸಂಸ್ಕೃಯ ಬೇರು ಗ್ರಾಮೀಣ ಬದುಕಿನೊಡನೆ ನಿಕಟ ಸಂಬಂಧವನ್ನು ಹೊಂದಿರುವವರೊಡನೆಯೇ ಅವರು ಒಡನಾಟದ ಎಳೆಗಳನ್ನು ಹುಡುಕುತ್ತಾ ಬಂದಿದ್ದಾರೆ. ಅವರಲ್ಲಿ ಸಂಕೋಚವೂ, ಮುನ್ನುಗ್ಗದಿರುವ ಲಜ್ಜೆಯೂ ಇರುವುದು ಅವರಿಗೆ ಗ್ರಾಮೀಣ ಬದುಕು ಕೊಟ್ಟ ಸ್ವಾಭಿಮಾನವನ್ನು ಸ್ವಾವಲಂಬಿತನವನ್ನು ಕಾಪಾಡಿಕೊಳ್ಳದಕ್ಕಾಗಿ ರಾಗೌ ಒಬ್ಬ ನಿಷ್ಕಲ್ಮಷ ಹೃದಯ, ಮಿತಭಾಷೆ, ಸುಸಂಸ್ಕೃತ ವ್ಯಕ್ತಿ ಚಿತ್ತ ಸಂಯಮ, ಅಂತಃಕರಣ ಹಾಗೂ ಮನುಕುಲದ ಒಳಿತಿಗಾಗಿ ಸದಾ ದುಡಿಯುವ ನೋವನ್ನು ನೀಡಿ ಸದಾ ನಗುವನ್ನು ನೀಡುವ ಸ್ವಚ್ಛಂದ ಅಭಿವ್ಯಕ್ತಿಯ ಅಪರೂಪ ದರ್ಶನ ಅವರ ಕಾವ್ಯದ ಸ್ಥಾಯಿಭಾವ ನೋವೇ ಆಗುವಂತೆ ಮೂಡಿದೆ ಮನುಕುಲದ ಚಾರಿತ್ರಿಕ ದಮನ ಬಂಡಾಯ ಕವಿಗೆ ಆಕ್ರೋಶವನ್ನು ಒಳಗೊಂಡ ಮಾನವತೆಯ ಆಶಯದ ಅಭಿವ್ಯಕ್ತಿಗೆ ದಾರಿಮಾಡಿಕೊಟ್ಟರೆ, ಅದೇ ಅಂಶ ರಾಗೌ ಅವರಲ್ಲಿ ಮೌನವಾಗಿ ಆಕ್ರಂದಿಸುತ್ತದೆ.

ಪ್ರಾಮಾಣಿಕ ಬರಹಗಾರರಾದ ಡಾ॥ ರಾಗೌರವರು ಜಾತಿಯ ಬೇರನ್ನು ಕಿತ್ತವರು, ಮಾನವತೆಯನ್ನು ಮೆರೆದವರು ಕುವೆಂಪುರವರ 'ವಿಶ್ವಮಾನವ' ಸಂದೇಶವನ್ನು ಪ್ರೀತಿಸಿದವರು ಬೆಳೆಸಿದವರು.

ಸಾಹಿತ್ಯ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ರಾಗೌ ಅವರಿಗೆ ಇಂದಿಗೂ ಎಂದಿಗೂ ನಿವೃತ್ತಿ ಎಂಬುದಿಲ್ಲ ಹತ್ತು ಹಲವು ಮಾನದಂಡವನ್ನುಳ್ಳ ಪಾಂಡಿತ್ಯ ಇವರದು ಎಂದರೆ ಯಾರು ಆಕ್ಷೇಪವೆತ್ತಲಾರರು. ಉದ್ವೇಗಗಳಿಲ್ಲದ ಮಾತು ಮತ್ತು ಮಾರ್ಗದಲ್ಲಿ ಕಟುತ್ವವನ್ನು ತೋರದ ರಾಗೌ ಸ್ಫಟಿಕದ ಸಲಾಕೆಯಂತೆ, ಬಿಳಿಯರಳೆಯಂತೆ, ಅಂತರಂಗ ಮತ್ತು ಬಹಿರಂಗದ ಶುದ್ದಿ ಹಾಗೂ ಪಾರದರ್ಶಕತೆಯಿಂದ ಪ್ರಕಾಶಿಸುವ ವಿಶಿಷ್ಟ ವ್ಯಕ್ತಿ.

ರಾಗೌ ಅವರ ವ್ಯಕ್ತಿತ್ವ ಬಹಳ ಶಿಸ್ತಿನಿಂದ ಕೂಡಿರುವಂತಹುದು. ಅವರ ನಡೆ,ನುಡಿ, ಆಚಾರ, ವಿಚಾರ, ಎಲ್ಲದರಲ್ಲೂ, ಅಚ್ಚುಕಟ್ಟು ಎದ್ದು ಕಾಣುತ್ತದೆ. ಯಾವುದೇ ವಿಚಾರದಲ್ಲಿನ ದಿಟ್ಟವಾದ ಗಟ್ಟಿನಿಲುವು ಇವರ ವ್ಯಕ್ತಿತ್ವವನ್ನು ಮತ್ತಷ್ಟು ದ್ವಿಗುಣಗೊಳಿಸುತ್ತದೆ. ಸರಳ ಜೀವನ, ಉದಾತ್ತ ಚಿಂತನೆಗೆ ಮಾದರಿ ಅವರ ಜೀವನವಾಗಿದೆ. ದುಂದುಗಾರಿಕೆಯಾಗಲಿ ಆಡಂಬವಾಗಲಿ ಅವರಿಂದ ಬಹಳ ದೂರ. ಮತ್ತೊಬ್ಬರ ಏಳಿಗೆಯನ್ನು ಉತ್ಕೃಷ್ಟವನ್ನು ಸದಾ ಬಯಸುವ ರಾಗೌ ನಮ್ಮ ನಾಡಿನ ಅಮೂಲ್ಯ ಆಸ್ತಿ. ನಮ್ಮ ಸಮಾಜಕ್ಕೆ ಬೇಕಾದ ಗಣ್ಯ ವ್ಯಕ್ತಿ. ತುಂಬಿದ ಕೊಡ ತುಳುಕುವುದಿಲ್ಲ ಎಂಬಂತೆ ಎಲ್ಲ ವಿಚಾರವನ್ನು ತಮ್ಮಲ್ಲಿ ಹುದುಗಿಸಿಕೊಂಡಿರುವ ಇವರು ಎಂದೂ ಬೇರೆಯವರ ಬಳಿ ತೋರಿಸಿಕೊಂಡವರಲ್ಲ. ಆದರ್ಶ ಅಧ್ಯಾಪಕ, ಶ್ರೇಷ್ಠ ವಿಮರ್ಶಕರು, ಒಳ್ಳೆಯ ಲೇಖಕರು ಹಾಗೂ ಸೃಜನಶೀಲ ಸನ್ನಡತೆ ಉಳ್ಳವರು. ಮಾತು ಬೆಳ್ಳಿ ಮೌನ ಬಂಗಾರ ಎಂಬುದನ್ನು ಅರಿತು ಮಾಡಿ ತೋರಿಸಿದವರು. ಅಪೂರ್ವ ಮೇಧಾವಿಯಾದ ಇವರು ವೈಚಾರಿಕತೆಯುಳ್ಳ ಸಂವೇದನಾಶೀಲರು. ಅವರದು ಸತತ ಅಧ್ಯಯನ, ಅಧ್ಯಾಪನ, ಸಂಶೋಧನಾ ಪ್ರವೃತ್ತಿ. ಕ್ರಿಯಾಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಅವರ ಸ್ವಭಾವ. ಸಹೃದಯ ವಲಯದಿಂದ 'ರಾಗೌ' ಎಂದು ಪರಮ ಪ್ರೀತಿಯಿಂದ ಕರೆಯಿಸಿಕೊಳ್ಳುವ ಶ್ರೀಯುತರು ತಮ್ಮ ಸುತ್ತಲಿನ ಪರಿಸರವನ್ನು ಸದಾ ಬೆಚ್ಚನೆಯ ಕಾವಿನಲ್ಲಿ ಹಿಡಿದಿಡುವ ಸೂಕ್ಷ್ಮ ಸಂವೇದಿ.

ಮಗುವಿನ ಮುಗ್ಧತೆ, ಯೋಗಿಯ ನಿರ್ಲಿಪ್ತತೆ, ತನ್ನೊಳಗೆ ನೋಯುವ ಸೀತಾ ಮಾತೆಯ ಗುಣಗಳಿಂದ ಪರಿಶುದ್ಧ ಮಾನವ ಪ್ರೇಮವನ್ನು ಬಿತ್ತುವ ಎತ್ತರದ ವ್ಯಕ್ತಿಯಾಗಿ ನಮಗೆ ಕಂಡುಬರುತ್ತಾರೆ.

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಅವರು ಈಗಾಗಲೇ ನಮ್ಮ ಕಾಲದ ಶ್ರೇಷ್ಠ ಸೃಜನಶೀಲ ಚಿಂತಕ. ಸಾಹಿತ್ಯ ಸಂಸ್ಕೃತಿಯ ಸಂವರ್ಧಕ, ನೆಲಮೂಲ ಚಿಂತನೆಯ ಜಾನಪದ ತಜ್ಞ, ಮಾನವೀಯ ಅಂತಃಕರಣದ ಕವಿ ಎಂಬೆಲ್ಲ ಅಭಿದಾನಗಳಿಗೆ ಭಾಜರಾಗಿದ್ದಾರೆ. ವಿದ್ವತ್ತಿನ ಅದ್ವಿತಿಯ ಜಾದೂಗಾರರಾದರೂ ಪ್ರಥಮತಃ ಅವರು ಕವಿ. ಬದುಕಿನ ಚಲನಶೀಲತೆ ಮತ್ತು ಅದು ಎದುರಿಸುವ ಆತಂಕ, ತಲ್ಲಣ, ಸಂಭ್ರಮ, ನೋವು, ನಿರಾಶೆಗಳನ್ನು ಕವನವಾಗಿರುವ ರಾಗೌ ಅವರದು ಸರಳ ಜೀವನ ಉದಾತ್ತ ಚಿಂತನ ನೋವಿಗೆ ಮಿಡಿಯುತ್ತಲೇ ದಮನವನ್ನು ಪ್ರತಿಭಟಿಸುವ ಅವರ ಕಾವ್ಯ ಅವರ ತನುಮನಗಳಂತೆ ಭಾವಸಂಶುದ್ಧಿಯಿಂದ ಕಂಗೊಳಿಸುತ್ತದೆ.

ಡಾ.ರಾಗೌ ಅವರದು ನಿರ್ಲಿಪ್ತ ಮನೋಭಾವ, ಮನಸ್ಸಿನ ಒಳಗಾಗಲೀ ಹೊರಗಾಗಲೀ ಎಂದೂ ಯಾವುದಕ್ಕೂ ಆಸೆ ಪಟ್ಟವರಲ್ಲಿ. ಇವರು ಮಿತ್ರಭಾವನೆಯ ಗುಣವುಳ್ಳವರು. ಸದಾ ಶಿಷ್ಯ ಪ್ರೇಮವನ್ನು ಬಯಸುವವರು. ನೂರಾರು ಮಂದಿ ಶಿಷ್ಯ ಬಳಗಕ್ಕೆ ಜ್ಞಾನದ ಬೆಳಕನ್ನು ನೀಡಿ, ಸರ್ವರ ಬದುಕು ಹಸನಾಗಲೆಂದು ಹರಸುವವರು. ಸಮುದಾಯದ ಮಧ್ಯೆ ಒಳ್ಳೆಯ ಬದುಕು ಸಾಗಿಸಬೇಕೆನ್ನುವ ಹಂಬಲ ಅವರದು. ಇವರು ದೂರ ದೃಷ್ಟಿಯ ಮನೋಬಲವುಳ್ಳವರು. ನೇರವಾದ ಲಭ್ಯಮಾರ್ಗವನ್ನು ಮಾತ್ರ ಅನುಸರಿಸಿ ತಮ್ಮ ಗುರಿ ಸೇರುವ ಇಚ್ಛಾಶಕ್ತಿ ಇವರದು. ಸನ್ನಡತೆಯನ್ನು ಮೈಗೂಡಿಸಿಕೊಂಡು ಮೃದುಹೃದಯಿಯಾಗಿ ಬಾಳುವುದು ಇವರ ಗುರಿ. ವ್ಯಕ್ತಿ ದೊಡ್ಡವನಾದರೆ ವೃತ್ತಿಗೆ ಗೌರವ ಎಂದು ತಿಳಿದು ಎಚ್ಚರಿಕೆಯ ಹೆಜ್ಜೆ ಇಟ್ಟವರು. ವೃತ್ತಿಯಲ್ಲಿ ಗೌರವಗಳಿಸಲು ತಮ್ಮ ಜೀವಮಾನದಲ್ಲಿ ಬಂದ ಎಲ್ಲಾ ರೀತಿಯ ತೊಡಕು, ಪೇಚಾಟ, ಗಂಡಾಂತರಗಳನ್ನು ಗೆದ್ದರು.

೧೯೫೫ ರಲ್ಲಿ ಮೈಸೂರು ವಿಶ್ವವಿದ್ಯಾಲಯ ಮಹಾರಾಜ ಕಾಲೇಜಿನ ಕನ್ನಡ ಅಧ್ಯಾಪಕರನ್ನಾಗಿ ನೇಮಕ ಮಾಡಿತು. ಅಲ್ಲಿಂದ ರಾಗೌ ಅವರ ಸೇವಾ ವೃತ್ತಿ ಪ್ರಾರಂಭವಾಯಿತು. ೧೯೮೦ ರಲ್ಲಿ ಪಿ.ಹೆಚ್.ಡಿ ಪದವಿಯನ್ನು ಪಡೆದರು. ಕರ್ತವ್ಯ ನಿಷ್ಠರು ಮತ್ತು ಸೇವಾ ಮನೋಭಾವದ ರಾಗೌ ಅವರು ಐದು ವರ್ಷಗಳ ಪದವಿ ಮತ್ತು ೩೨ ವರ್ಷಗಳ ಸ್ನಾತಕೋತ್ತರ ತರಗತಿಗಳಿಗೆ ಅಧ್ಯಾಪಕರಾಗಿ, ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ೩೭ಗಳ ಸುದೀರ್ಘ ಸೇವೆಯಿಂದ ೨೦೦೨ ರಲ್ಲಿ ನಿವೃತ್ತರಾದರು.

ನಿವೃತ್ತಿ ನಂತರ ಜಿ ಎಸ್. ಎಸ್. ಸಂಸ್ಥೆಯಲ್ಲಿ ಚಾಮರಾಜನಗರದಲ್ಲಿ ಕೆಲಸ ಮಾಡಿದರು. ಪ್ರಸ್ತುತ ಮಂಡ್ಯದ ಕರ್ನಾಟಕ ಸಂಘ ಸಂಯೋಜಕತ್ವದಲ್ಲಿ ಹಂಪಿ ವಿಶ್ವವಿದ್ಯಾನಿಲಯ ನಡೆಸುತ್ತಿರುವ ಎಂ.ಫಿಲ್ ಸಂಶೋಧನಾ ಕೇಂದ್ರದಲ್ಲಿ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಲ್ಲದೆ ಕನ್ನಡ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿದ್ದಾರೆ. ೨೦೦೯ ರಲ್ಲಿ 'ಅನಾಗತ' ಎಂಬ ಧ್ವನಿ ಸುರುಳಿಯನ್ನು ಮಂಡ್ಯದ ಕರ್ನಾಟಕ ಸಂಘದ ಸಹಯೋಗದೊಂದಿಗೆ ಬಿಡುಗಡೆ ಮಾಡಿದರು.

ಕುವೆಂಪು ಅವರ ಆದರ್ಶ, ಸಮಾಜ ವಯಸ್ಕರ ಒಡನಾಟ, ಅಧ್ಯಯನ,ಅಧ್ಯಾಪನ, ಬರಹ ಇದೇ ಅವರ ಪರಮ ಜಗತ್ತು ಸ್ವಭಾವಯುತವಾಗಿ ಅವರು ಅಂತರ್ಮುಖಿ ಸ್ವಭಾವಯುಳ್ಳವರು ಜೀವನದಲ್ಲಿ ಅತ್ಯಂತ ಹೆಚ್ಚು ದುಃಖ ಉಂಡವರು ತಂದೆ-ತಾಯಿ ಮಗಳು ಶ್ರೀಮತಿ ಕವಿತಾ ಸಾವು ಅವರ ಜೀವನದ ಅತ್ಯಂತ ನೋವಿನ ಕೆಲ ಸನ್ನಿವೇಶಗಳು ಮಗಳ ಜ್ಞಾಪಕಾರ್ತವಾಗಿ ಸಮಾಜದಲ್ಲಿ ಸಾಧನೆಗೈದ ಮಹಿಳೆಯರಿಗೆ ಶ್ರೀಮತಿ ಕವಿತಾ ಸ್ಮಾರಕ ಪ್ರಶಸ್ತಿಯನ್ನು ನೀಡುತ್ತಿದ್ದಾರೆ.

ಡಾ॥ ರಾಗೌ ಅವರ ಸಾಹಿತ್ಯ ಸಾಧನೆಗೆ ೧೯೩೦, ೧೯೩೮, ೧೯೪೫, ೧೯೮೮ ಹಾಗೂ ೧೯೯೩ ಹೀಗೆ ಐದು ಬಾರಿ ಸಾಹಿತ್ಯ ಅಕಾಡಮಿ ಬಹುಮಾನ ಲಭಿಸಿದೆ. 'ಕುವೆಂಪು ಸಾಹಿತ್ಯ ವಿಮರ್ಶನ' ಕೃತಿಗೆ ಕುವೆಂಪು ವಿದ್ಯಾವರ್ಧಕ ಟ್ರಸ್ಟ ಬಹುಮಾನ ಸಿಕ್ಕಿದೆ. ಜಾನಪದ ಮತ್ತು ಯಕ್ಷಗಾನ ಅಕಾಡಮಿ 'ಜಾನಪದ ತಜ್ಞ' ಅಭಿದಾನ ಸಂದಿದೆ. ೨೦೦೧ ರಲ್ಲಿ ವಜ್ರ ಕುಸುಮದಂತಹ ವ್ಯಕ್ತಿಯಾದ ರಾಗೌ ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡಮಿಯ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ೧೯೯೫ ರಲ್ಲಿ ೪ ನೇ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು.

ಬೋಧನ ಕ್ರಿಯೆ ಮತ್ತು ಲೇಖನ ಕ್ರಿಯೆಯಲ್ಲಿ ಪಳುಗಿದ್ದ ರಾಗೌ ಅವರದು ಪ್ರಾಮಾಣಿಕ ಬದುಕು ಧೃಢ ನಿಲುವಿನ ಆದರ್ಶಜೀವಿ. ಸರಳ, ಸಜ್ಜನ, ನಿಗರ್ವಿ. ಇವರ ಮಾತು ಮೃದು ಆದರೆ ಮುಳ್ಳಿನಂತೆ ಕಠಿಣ ಬೆಂಕಿಯಂತೆ ಬಿರುಸು,ಆದರೆ ಎಂತ ಬೆಂಕಿಗೊ ಕರಗದ ಮನಸ್ಸು ಅವರು ಅಜಾತಶತ್ರು.

# ಅಧ್ಯಾಯ-೨

## ಸೃಜನಶೀಲ ಕೃತಿಗಳು

ರಾಗೌ ಅವರು ಸಾಹಿತ್ಯ ಕೃಷಿಯನ್ನು ಗಮನಿಸಿದರೆ ಅವರು ಪ್ರಪ್ರಥಮವಾಗಿ ಕವಿಗಳೆಂಬುದು, ಪ್ರಾಚೀನ ಕವಿ ಪಂಪನಿಂದ ಅಧುನಿಕ ಕವಿ-ಕುವೆಂಪು ಅವರವರೆಗೆ ಕಾವ್ಯಗಳ ಅಧ್ಯಯನದಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು ಎಂಬುದು ತಿಳಿದು ಬರುತ್ತದೆ. ರಾಗೌ ಅವರ ಸೃಜನಶೀಲ ಕವಿಗಳಾಗಿರುವಂತೆ, ಚಿಂತನಶೀಲ ಕಾವ್ಯಭ್ಯಾಸಿಗಳಾಗಿದ್ದಾರೆ.

ರಾಗೌ ಅವರ ಬರವಣಿಗೆ ಪ್ರಾರಂಭವಾದದ್ದೆ ಕಾವ್ಯದಿಂದ. ಅವರ ಮೊದಲ ಕವನ ಸಂಕಲನ ಯಾತ್ರೆ ಪ್ರಕಟವಾದದ್ದು ೧೯೬೬ ರಲ್ಲಿ ಇಲ್ಲಿಂದ ಪ್ರಾರಂಭವಾದ ಕಾವ್ಯಯಾತ್ರೆ ಅನಾಗತದವರೆಗೆ ಮುಂದುವರೆದಿದೆ. ಈ ಕಾವ್ಯಯಾತ್ರೆಯಲ್ಲಿ ಅವರು ಕಂಡ ಜೀವದ ಅನುಭವವನ್ನು ವೈವಿಧ್ಯಪೂರ್ಣವಾಗಿ ಚಿತ್ರಿಸಿದ್ದಾರೆ. ಸಮಾಜ ಪರವಾದ ನಿಷ್ಠೆ ಮತ್ತು ಆತ್ಮ ನಿಷ್ಠೆ ವಿಷಯಗಳನ್ನು ಪ್ರಾಮಾಣಿಕ ದೃಷ್ಟಿಯಿಂದ ನೋಡುವ ಪ್ರಯತ್ನವನ್ನು ಯಾತ್ರೆಯಲ್ಲಿ ಮಾಡಿದ್ದಾರೆ. 'ಯಾತ್ರೆ' ಎಂಬ ಹೆಸರೇ ಔಚಿತ್ಯಪೂರ್ಣವಾದುದು. ಏಕೆಂದರೆ ಸಾಹಿತ್ಯ ಲೋಕಕ್ಕೆ 'ಯಾತ್ರೆ' ಹೊರಟ ಚೊಚ್ಚಲ ಪ್ರಯತ್ನವಾಗಿದೆ. ಈ ಕವನ ಸಂಕಲನವು ಪರಂಪರೆಯನ್ನು ಶೋಧಿಸುತ್ತಾ ಉತ್ತಮ ಅಂಶಗಳನ್ನು ಸ್ವೀಕರಿಸುತ್ತಾ ಸಾಗುತ್ತದೆ. 'ಯಾತ್ರೆ' ಎಂಬ ಕವನದಲ್ಲಿ

"ಮೂಡೆ ಮನದಲಿ ನೂರು ಸಾಸಿರ ಎಬ್ಬೆಗ
ಬಿಸಿಲು ತಾಪವ ನೋವು ಕಾವಿನವೇಗ"

ಹೀಗೆ ಅನೇಕ ಎಡರು ತೊಡರುಗಳಿದ್ದರು ಮಧ್ಯದಲ್ಲಿ ಆತ್ಮ ಸಾಗಬೇಕಾದ ಪಥವನ್ನು ಸೂಚಿಸುತ್ತದೆ. ಈ ಪದ್ಯದ ಕೊನೆಯ ಸಾಲು "ಎಂದು ಬರುವುದೊ ಹೃದಯ

ಕಮಲಕೆ ಬೆಳಕಿನ ಪ್ರಸಾರ! ಕವಿಯ ಹೃದಯದಲ್ಲಿ ಒಂದು ಹೊಸ ಬೆಳಕಿನ ಬರುವಿಕೆಯ ಹಂಬಲವಿದೆ ಎಂಬುದು ಗೋಚರವಾಗುತ್ತದೆ.

ಬರಿದಯ್ಯೋ ಬಂದೋ/ ನನ್ನೆದೆಯ ಪಾತ್ರೆ /ತುಂಬಲದನೆ ಅಂತಂತೆ/ ಹೊರಡಬೇಕು ಯಾತ್ರೆ (ಕ್ಷಣ ದರ್ಶನ-ಯಾತ್ರೆ), ಕಿತ್ತು ಬರಲೀಗ ಇತ್ತ/ ಬೇಕಯ್ಯ ನಿನ್ನ ವರದ ಅಭಯ ಹಸ್ತ ( ನಾನೇನನ್ನೂ ಮಾಡಲಿಲ್ಲ) ಇತ್ಯಾದಿ ಸಾಲುಗಳನ್ನು ಅವಲೋಕಿಸಿದರೆ ಆಧ್ಯಾತ್ಮಿಕ ಆಲೋಚನೆಗಳ ಒಳನೋಟಗಳು ದೊರೆಯುತ್ತದೆ. ರಾಜಕೀಯ ವೇದಿಕೆ

**ಪದ್ಯದಲ್ಲಿ –**

[೨] "ಕಾಸು ಕೊಟ್ಟರೂ ಕೊಳಕು ಮಜ್ಜಿಗೆ
ಈ ರಾಜಕೀಯ ವೇದಿಕೆ," [೨]

ಎಂಬಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲೂ ರಾಜಕೀಯದ ದೊಂಬರಾಟವು ಸ್ಪಷ್ಟವಾಗಿ ಕಾಣುತ್ತದೆ. 'ಮೆರೆದ ತಲೆಗಳೆನಿತೊ ಮರೆತು ಹೋದವು ಹೇಳಹೆಸರಿಲ್ಲದಂತೆ' ಎಂದು ಹೇಳುವ ಸಂದರ್ಭದಲ್ಲಿ ಹಿಂದಿನ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪರಂಪರೆಯ ಬಗ್ಗೆ ಕವಿ ಪ್ರಜ್ಞಾಪೂರ್ವಕ ಎಚ್ಚರಿಕೆ ನೀಡುತ್ತಿದ್ದಾರೆ.

'ಮಾತಿನ ಮಲ್ಲರು' ಕವಿತೆಯ ಸಾಲುಗಳನ್ನು ಗಮನಿಸಿದರೆ,

[೩]"ಬರಿಯ ಬಾಯಿ ಬಡುಕರು
ಕಂಡವರ ಸುದ್ದಿಯಲ್ಲೆ ಬಲು ಆಸಕ್ತರು!" [೩]

ಇದು ಇಂದಿನ ಯುವ ಜನತೆಯ ಜೀವನ ಅಳಿ ತಪ್ಪಿದ ರೈಲಿನಂತೆ ಕರ್ತವ್ಯದ ಅರಿವಿಲ್ಲದೆ ಜೀವನ ನಡೆಸುತ್ತಿರುವುದನ್ನು ಕವಿ ಕುಹಕದ ರೀತಿ ಚಿತ್ರಿಸಿ ಯುವ ಜನತೆಯನ್ನು ಎಚ್ಚರಿಸುವ ಪ್ರಯತ್ನ ಮಾಡಿದ್ದಾರೆ.

"ಬಂದರೂ ಬರಲಿ ಬಿಡು' ಕವಿತೆಯಲ್ಲಿ

ಕಷ್ಟ ಕಾರ್ಪಣ್ಯಗಳು ಬಂದರೂ ಬರಲಿ ಬಿಡು

ಧೃತಿಗೆಟ್ಟು ಬಲುಕಂದಿ ಕಹಿಯೆನ್ನ ಬೇಡ"

ಎಂಬಲ್ಲಿ ಜೀವನದಲ್ಲಿ ಪಡೆದ ಅನುಭವವು ಮಾತಾಗಿ ಹೊರಬಂದಿದೆ. ಸಹೃದಯರಲ್ಲಿ ಜೀವನದಲ್ಲಿ ಕಂಡುಬರುವ ಕಷ್ಟಗಳಿಗೆ ಧೃತಿಗೆಡಬೇಡಿ ಎಂದು ಹೇಳುತ್ತಾ ಆತ್ಮವಿಶ್ವಾಸವನ್ನು ತುಂಬುವ ಪ್ರಯತ್ನ ಮಾಡಿದ್ದಾರೆ.

[೪]"ಲೋಕದ ಬಹುಜನರ ಅನುಭವವು ಕವಿಯ ಸ್ವಾನುಭವವಾಗಿ ಮಾಡಿದಾಗ ಆ ಕವಿತೆ ಆದರಣೀಯವಾಗುತ್ತದೆ. ಕವಿತೆಯಲ್ಲಿ ಅನುಭವದ ಪ್ರಾಮಾಣಿಕತೆ ಮುಖ್ಯ. ಅದರ ರಮ್ಯವಾದ ಅಭಿವ್ಯಕ್ತಿ ಮುಖ್ಯ. 'ಯಾತ್ರೆ' ಕವನಗಳಲ್ಲಿ ಪ್ರಾಮಾಣಿಕತೆ ಇದೆ. ಅಭಿವ್ಯಕ್ತಿ ರಮ್ಯತೆ ಇದೆ ಎಂದು ಪರಮೇಶ್ವರಭಟ್ಟರು ಅಭಿಪ್ರಾಯ ಪಟ್ಟಿದ್ದಾರೆ." ಹೌದು ಯಾವುದೇ ಕಾವ್ಯ ರಚನೆಯ ಸಂದರ್ಭದಲ್ಲಿ ಕವಿಗೆ ಅನುಭವವೇ ಪ್ರಮುಖ ಆಕರ. ಆ ಅನುಭವದ ಪ್ರಾಮಾಣಿಕ ಹೊರ ಹಾಕುವಿಕೆಯಿಂದ ಕವಿತೆ ಶಾಶ್ವತವಾಗುತ್ತದೆ. ಅಂತಹ ಪ್ರಾಮಾಣಿಕ ಕೈಕನ್ನಡಿ 'ಯಾತ್ರೆ' ಕವನ ಸಂಕಲನವಾಗಿದೆ.

ಐದು 'ತೆರೆಗಳನ್ನುಳ್ಳ ತೆಪ್ಪ' ರಾಗೌ ಅವರ ಎರಡನೇ ಕವನ ಸಂಕಲನ ೧೯೭೭ರಲ್ಲಿ ಪ್ರಕಟವಾದದ್ದು' ರಾಗೌ ಮುಕ್ತಕ ಪ್ರಕಾರಕ್ಕೆ ಮೊದಲಿನಿಂದಲೂ ಒಲಿದಿರುವ ಸೂಚನೆಯನ್ನು ಈ ಸಂಕಲನ ನೀಡುತ್ತದೆ. ಇದರಲ್ಲಿ ಹಿತಚಿಂತನೆ, ಅಸಹನೆ, ಅನ್ವೇಷಣೆ, ನಂಬಿಕೆ, ಜನಪದ ಮನೋಭಾವನೆಗಳು ಅದಮ್ಯವಾಗಿ ಒಳಮೂಡಿವೆ.

'ಕಲೆಯೆ ಕಡು ಜಾಣರ ಕೈ ಹಿಡಿದು ನಡೆಸುವ

ಸರಸತಿಯೆ ನಿನಗೆ ನಮಿಸುವೆ'

ಎಂಬ ಸಾಲುಗಳು ಜನಪದೀಯ ಶೈಲಿಯನ್ನು ನೆನಪಿಸುತ್ತದೆ. ಅಷ್ಟೇ ಅಲ್ಲದೆ ಕವಿಯ ದೈವಿ ಭಕ್ತಿಗೆ ಸಾಕ್ಷಿಯಾಗಿದೆ.

"ಹಲ ಕೆಲವು ಅನುಭವ ಹಣ್ಣಾಗಿ ಬರಲಿಲ್ಲ
ಮುಕ್ತಕವೊಂದು ಮೂಡವುದಿಂತು."

ಎಂಬಲ್ಲಿ ಅನುಭವವು ಕಾವ್ಯದ ಹುಟ್ಟಿಗೆ ಪ್ರಮುಖ ಆಯುಧವೆಂಬುದನ್ನು ಸ್ಮರಿಸಿದ್ದಾರೆ.

ಜಾನಪದ ಜೀವನಾನುಭವ, ಸಹಜ ಸಿದ್ಧಲಯ, ಸರಳಾಭಿವ್ಯಕ್ತಿ ತೆಪ್ಪದಲ್ಲಿ ಹಾಸು ಹೊಕ್ಕಾಗಿ ಮೂಡಿಬಂದಿವೆ. ಸ್ಪಂದನ ಶೀಲ ಅಂತರಂಗ ಬದುಕಿನ ಏರು ಪೇರುಗಳನ್ನು ಅನುಭವಿಸಿದಾಗ ಸಹಜವಾಗಿಯೇ ಕಾವ್ಯದ ಹೊಳೆ ಅಲೆಯಲೆಯಾಗಿ ಹರಿದು ಬರುತ್ತದೆ. "ನನ್ನೊಳ ಎದೆಯೊಳು ಮಿಡಿಯುವ ಭಾವಕೆ ಹತ್ತಾರು ಸ್ವರದನುಕಂಪ" ಎನ್ನುವ ಕವಿ, "ಹಲಕೆಲವು ಅನುಭವ ಹಣ್ಣಾಗಿ ಬರಲಿಲ್ಲ ಮುಕ್ತಕವೊಂದು ಮೂಡವುದಿಂತು" ಎಂದು ಮುಕ್ತಕ ಮೂಡಿ ಬರುವ ಲಕ್ಷಣವನ್ನು ಅಡಕಗೊಳಿಸಿ ಹೇಳಿದ್ದಾರೆ.

'ತೆಪ್ಪ' ಬರೆಯುವ ಕಾಲಕ್ಕೆ ಕವಿಯಲ್ಲಿ ತರ್ಕ, ವಿಚಾರವಾದ, ವಿಶ್ಲೇಷಣೆಗಳಿಗಿಂತ ಹೆಚ್ಚಾಗಿ ಸರಳತೆ, ಹಿತಚಿಂತನೆ,ದೇವರಲ್ಲಿ ನಂಬಿಕೆ,ಮಾನವ ಸಹಜವಾದ ಅನ್ವೇಷಣೆ, ಸಾಮಾಜಿಕ ಅಸಮಾನತೆಯ ಬಗ್ಗೆ ಅಸಹನೆ ದುಃಖ ನಿವಾರಣೆಯ ಮಾರ್ಗಗಳ ಹುಡುಕಾಟ ಕಂಡುಬರುತ್ತವೆ. ಮುಖ್ಯವಾಗಿ ಜನಪದ ಮನೋಭಾವಗಳಲ್ಲಿ ಆಸಕ್ತಿ, ಸರ್ವಜ್ಞನಂಥ ಸಹಜ ಸಂತರ ಅಭಿವ್ಯಕ್ತಿಯ ಧೋರಣೆ ತೆಪ್ಪದಲ್ಲಿ ಎದ್ದು ಕಾಣುತ್ತವೆ. "ಬೆಲ್ಲದ ಜೊತೆಯಲ್ಲಿ ಬೇವದು ಸೇರಲ್ಲಿ" ಎಂಬ ಸಂಯಮ ಮತ್ತು ಸಮನ್ವಯದ ಆಲೋಚನೆಯ ಜೊತೆಗೆ ನಮ್ಮನ್ನು ನಾವೇ ರೂಪಿಸಿ ಕೊಳ್ಳಬೇಕೆಂಬ" ಆತ್ಮ ವಿಶ್ವಾಸ ಇವರಲ್ಲಿದೆ.

“ಪಥವೂ ನಾವೆಯೇ ಪಥಿಕರೂ ನಾವೆಯೇ

ನೆತ್ತಿಯ ಸೂರ್ಯನೆ ಕೈದೀಪ

ನಮ್ಮರಿವಿನ ಕೋಲನೆ ಕುಟ್ಟುತ ನಡೆದರೆ

ಆಡಚಣೆಯಿಹುದೇನು ಭೂಪ”

ಆತ್ಮ ವಿಶ್ವಾಸವಿದ್ದರೆ ಸಾಲದು,ಕೊಳೆಯನ್ನು ತೊಳೆದು ಹಾಕಬೇಕೆಂಬ ಆದರ್ಶವೂ ಅವಶ್ಯಕ. ಹಿತದೃಷ್ಟಿ ಮಾನವತೆಯ ಸಂಕೇತ.

“ತುಂಗೆಯು ಗಂಗೆಯು ಯಮುನೆಯು ಕೃಷ್ಣೆಯು

ತಪತಿ ಗೋದಾವರಿ ನರ್ಮದಾ

ಕಪಿನಿ ಕಾವೇರಿಯು ಲಕ್ಷಣ ಶರಾವತಿಯು

ತೊಳೆಯಲಿ ಕೊಳೆಯ ಸರ್ವದಾ”

“ಬಾಳಿನ ರೋಡಿನ ಗಡಿಬಿಡಿಯ ಪಯಣಿಗ

ಕಾಲದೀ ರೈಲಿನೇತರ ತಡೆಯ

ಹತ್ತಿಸುತ ಇಳಿಸುತ ಹೋರುತ ಹೊರಟಿದೆ

ನಿಲ್ಲದೆಲ್ಲಿಯು ಒಂದು ಕಡೆಯು”

ಎಂಬಲ್ಲಿ ಕಾಲದ ನಿರಂತರತೆಯನ್ನು ತಿಳಿನುಡಿಗಳಲ್ಲಿ ತಿಳಿಸಲಾಗಿದೆ. ‘ತೆಪ್ಪ’ ಸಂಕಲನವನ್ನು ಅವಲೋಕಿಸಿದಾಗ ಅಪಾರವಾದ ಅನುಭವ, ಭಾಷೆಯ ಮೇಲೆ ಪ್ರಬುದ್ಧತೆ ಹಾಗೂ ಹಿಡಿತ, ಅಸಾಧಾರಣ ಪ್ರತಿಭಾಶಕ್ತಿ ಇದ್ದಾಗ ಮಾತ್ರ ಮುಕ್ತಕಗಳನ್ನು ಸಮರ್ಥವಾಗಿ ಬಳಸಲು ಸಾಧ್ಯ ಎಂಬುದು ವೇದ್ಯವಾಗುತ್ತದೆ.

‘ಮೋಡ ಮುಸುಕಿದ ಆಕಾಶ’ ಕವನ ಸಂಕಲನದಲ್ಲಿ ಸಾವು-ಹುಟ್ಟಿನ ನಡುವಿನ ಬದುಕಿನ ಅನ್ವೇಷಣೆ, ಬದುಕಿನ ನೋವು, ನೋವಿನ ನಡುವೆ ಸುಖದ ನೆಲೆಯನ್ನು

ಹುಡುಕುವುದು, ಮಾನವೀಯತೆ, ಶೋಷಣೆಯ ಖಂಡನೆ ಮುಂತಾದವು ಇಲ್ಲಿ ಅಭಿವ್ಯಕ್ತವಾಗಿದೆ. ನಿರಾಶೆಯ ನಡುವೆ ಆಸರೆಯ ಹುಡುಕಾಟ ನಿರಂತರವಾಗಿ ಸಾಗಿದೆ.

"ತೆರೆಹೆದ್ದೊರೆಗಳ ಸಮಾಗಮ
ಮಾವು ಬೇವಿನ ಮಿಲನ !
ಎಂಬಲ್ಲಿ ಬದುಕಿನ- ಕಹಿಸಿಹಿಗಳ ಅವಲೋಕನವಿದೆ."

ಜತನ ಕವಿತೆಯ ಸಾಲುಗಳಲ್ಲಿ

" ನಿನ್ನೊಳಗ ನೀ ಬೆಳೆ......
..............................
ಜತನವಿರುವ ತಮ್ಮ. "

ಎಂಬಲ್ಲಿ ಕವಿ ತನ್ನನ್ನು ತಾನೇ ಪ್ರಜ್ಞಾಸ್ಥಿತಿಗೆ ತಂದುಕೊಳ್ಳುವ ಪರಿ ವಿಶೇಷವಾಗಿದೆ.

ತವಕ ಮೌನವಾಗಿ ಜನರ ನೋವಿಗೆ ಸ್ಪಂದಿಸಿದಾಗ ಅನುಕಂಪವೇ ಅದಮ್ಯ ರಸಧಾರೆಯಾಗಿ ಹೊರ ಹೊಮ್ಮುತ್ತದೆ. ಕವಿಗೆ ಅನಿವಾರ್ಯವಾಗಿ ಇರಬೇಕಾದ ಈ ಗುಣವನ್ನು ಬಂಡಾಯವೆಂದೋ ಮಾನವತಾವಾದವೆಂದೋ ಚಳುವಳಿಗಳ ರಥಕ್ಕೆ ಕಟ್ಟಿ ಎಳೆಯ ಬೇಕಾಗಿಲ್ಲ. ಮಾನವನಾಗಿ ಹುಟ್ಟಿದ ಕವಿಗೆ ಇದು ಸಹಜ ಗುಣವಾಗಿ ಬೆಳೆದು ಬರಬೇಕು:

"ಸುತ್ತ ಚೆಲ್ಲಿರೆ ಅಸಹಾಯಕ ಬದುಕು
ಮೋಹದೆದೆಯೊಳಗೆ ಒಡೆದ ಚಿಲುಮೆ,
ಜೀವ ತನುವಿನ ಮೇಲೆ ವಿಷಾದದ ಛಾಯೆ
ನರರಾರ್ತಸ್ವರವೆಲ್ಲಿ ಸಾವಿನ ಕೈಗಾನ"

ಇಪ್ಪತ್ತೈದು ವರ್ಷಗಳಲ್ಲಿ ರಾಗೌ ಅವರು ರಚಿಸಿದ ನೂರ ನಾಲ್ಕು ಕವನಗಳು ದಲಿತ -ಬಂಡಾಯ ಚಳುವಳಿಯ ಕಾಲದಲ್ಲಿ ಒಬ್ಬ ಸ್ವೇಚ್ಛಾ ಪ್ರೇಕ್ಷಕನ ಸದ್ದುಗದ್ದಲವಿಲ್ಲದ ಪ್ರತಿಕ್ರಿಯೆಯ ಪ್ರತೀಕಗಳಂತೆ ಮೂಡಿ ಬಂದಿದೆ. ಮನುಕುಲದ ಒಂದು ವರ್ಗದ ಮೇಲೆ ಇನ್ನೊಂದು ವರ್ಗ ತೋರುವ ತಿರಸ್ಕಾರ, ದಬ್ಬಾಳಿಕೆ, ಅತ್ಯಾಚಾರ- ಇವು ತೀವ್ರ ಪ್ರತಿಕ್ರಿಯೆಯನ್ನೇ ಅಪೇಕ್ಷಿಸುತ್ತವೆ. ಗಾರ್ಕಿ ಹೇಳಿದಂತೆ ಸಹನೆಯ ಲಕ್ಷಣ, ಆದರೆ ಸಂಯಮ ಕಳೆದುಕೊಳ್ಳುವ ಅವಶ್ಯಕತೆ ಇಲ್ಲ. ಸಂಯಮಶೀಲ ಪ್ರತಿಕ್ರಿಯೆಯ ಪ್ರತಿಭಟನೆ ಆಗುವ ಸಾಧ್ಯತೆ ಇದೆ ಎನ್ನುವುದು ಮೋಡ ಮುಸುಕಿದ ಆಕಾಶದ ಹಲವು ಕವನಗಳ ಆಶಯವಾಗಿದೆ.

" ಅನುಭವ ಹಲವು ತೆರೆ, ತಾರತಮ್ಯವೆಲ್ಲಿದೆ ಅದಕೆ
ಕಲಕುವ ಕಲ್ಲು ಬಿದ್ದೀತು ನಿನ್ನ ಶಾಂತ ಸಾಗರಕೆ
ಗಾಯಾಳು ವಾದರೂ ವೀರನಂತೆ ಹೋರುವುದು
ಮೇಲು ಬೇರೆ ದಾರಿ ಎಲ್ಲಿದೆ ತೋರು?"

ರಾಗೌ ಅವರ ಕವನಗಳನ್ನು ಭಾವನಿಷ್ಠ ಅಥವಾ ಸಮಾಜ ನಿಷ್ಠವೆಂದು ಗೆರೆ ಎಳೆದು ತೋರಿಸಲಾಗುವುದಿಲ್ಲ. ಆಧುನಿಕ ಸಾಹಿತ್ಯ ಸಿದ್ಧಾಂತಗಳ ಅಥವಾ ರಾಜಕೀಯ ಸಿದ್ಧಾಂತಗಳ ಹಿನ್ನೆಲೆಯಲ್ಲಿ ವಸ್ತುವನ್ನು ಸೀಮಿತಗೊಳಿಸಿ ಕೊಂಡವರಲ್ಲ ಈ ಕವಿ. ಮನುಕುಲದ ದುರಂತದಿಂದ ಹಿಡಿದು ಹಾರಿ ಹೋದ ಹಕ್ಕಿ ಗಳವರೆಗೆ ಎಲ್ಲವೂ ಕವಿಗೆ ಆಪ್ತವಾದವೇ.ಏನೇ ಬರೆದರೂ ಗ್ಲಾನಿಯ ಸೂಚನೆಗಳು ವಾಸ್ತದ ನೆಲೆಗಳು ನಿರಪೇಕ್ಷವಾಗಿಯೇ ಹರಿದು ಬರುತ್ತವೆ.

'ದುಡಿಮೆ ದೇವರ ಗೋಪುರದ ಗಂಟೆ' ಎಂಬ ಸದಾಶಯ ಸತತವಾಗಿ ವ್ಯಕ್ತವಾಗುತ್ತಲೇ ಇರುತ್ತದೆ. ಬದಲಾದ ವಾತಾವರಣಕ್ಕೆ ಹೊಂದಿಕೊಳ್ಳುವ ಹಂಬಲವಿದ್ದರೂ ದೃಢ ಸಂಕಲ್ಪಕ್ಕೆ ಎಂದೂ ಧಕ್ಕೆ ಇಲ್ಲ.

"ಬದಲಾದ ವಾತಾವರಣದಲ್ಲಿ ಬೀಸೀತು ಬಿರುಗಾಳಿ
ಬಂದೀತು ಬಿರುಮಳೆ
ಇದ್ದೀತು ನಾನಾ ತೆರನ ಪ್ರಚೋದನೆ\
ಆದರೂ ಮೀರದಿರೆನ್ನ ಕಡಲೇ,
ತಪ್ತ ಒಡಲೇ (ತಪ್ತ)"

ಎಂಬ ಎಚ್ಚರದ ವ್ಯಕ್ತಿತ್ವ ಮುಂದುವರಿದಿದೆ. ಆದರೆ ಕಾರ್ಯ ಶೂರತ್ವಕ್ಕೆ ಲೋಪವಿಲ್ಲ;

ಅಸಹಾಯಕತೆಯೊಮ್ಮೆ ಸಿಡಿಯುವುದನಿವಾರ್ಯ
ಆದರದಕೆ ಕಡೆತನಕೆ ಕಾಯಿ;
ಇಲ್ಲದಿರೆ ವ್ಯರ್ಥವಾದೀತು ಪುರಾತನ ಸಂಯಮ
ನೀರವ ಮೌನ(ತಪ್ತ)

ಒಳಗೊಳಗೆ ಲೋಪಗಳನ್ನು ಸರಿಪಡಿಸುತ ದೀಪಗಳನ್ನು ಉರಿಸುತೊಸಗೆಯ ಬೀರಿ ಬೆಸಗೆಗೊಳ್ಳಲಿ ಜೀವ ಕವನ ಸಂಕಲನದ ಪ್ರಥಮ ಕವನವಾದ 'ಪ್ರಾರ್ಥನೆ' ಯಲ್ಲಿ ಜೀವನದ ಎಲ್ಲ ಎಡರು ತೊಡರುಗಳನ್ನು ತಿದ್ದಿಕೊಳ್ಳುತ್ತಾ ಹೊಸ ಬೆಳಕು ಜೀವನದ್ದೂದಕ್ಕೂ ಕೈ ಹಿಡಿದು ನಡೆಸಲಿ ಎಂಬ ಆಶಯವನ್ನು ಹೊಂದಿದೆ. ಈ ಆಶಯವೇ ಸದಾ ಚೈತನ್ಯಶೀಲರಾಗಿ ಮಾಡುತ್ತದೆ. ಹಾಗಾಗಿ ಬಸವೇಶ್ವರ, ಬುದ್ಧಸ್ಮೃತಿ, ತಾಯಿಥೆರೆಸಾಗೆ ಮುಂತಾದ ಕವನಗಳು ಮಾನವನ ಮಾನವೀಯ ಇತಿಹಾಸದ ಮೈಲಿಗಲ್ಲನ್ನು ನೆನಪಿಗೆ ತರುತ್ತದೆ.

ನೆಲದ ಮರೆ ನಿಧಾನದ (೧೯೯೯) ನೂರೆಂಟು ಸಾನೆಟ್ಟುಗಳ ಮೂಲಕ ರಾಗೌ ಕಾವ್ಯ ಜೀವನದ ಒಂದು ಹೊಸ ಮಜಲನ್ನು ಮುಟ್ಟಿದ್ದಾರೆ. ನೂರೆಂದು ಸುನೀತ ಪದ್ಯಗಳಿರುವ ಈ ಸಂಕಲನದಿಂದ ಕನ್ನಡ ಸಾನೆಟ್ ಸಂಪತ್ತು ವೃದ್ಧಿಯಲ್ಲಿ ಅಗ್ರಗಣ್ಯರಾದ ಕುವೆಂಪು, ಬೇಂದ್ರೆ, ಮಾಸ್ತಿ, ಪು.ತಿ.ನರ ಸಾಲಿನಲ್ಲಿ ನಿಲ್ಲುತ್ತಾರೆ.

ಈ ಸಂಕಲನದ ವಸ್ತು ವೈವಿಧ್ಯ ಪೂರ್ಣವಾದುದ್ದು. ಇಲ್ಲಿ ಚಿಟ್ಟೆ, ಮೆಲುಗಾಳಿ, ಸಂಜೆ ಮಳೆಯ ಪ್ರಕೃತಿ ವಿಲಾಸದ ಚಿತ್ರಗಳಿವೆ. ಸಾವಿತ್ರಿ, ಬಾಹುಬಲಿ, ಕುವೆಂಪು, ಬಿಎಂಶ್ರೀ, ಗೋವಿಂದಪೈ. ಶಂಕರಗೌಡರ ವ್ಯಕ್ತಿ ಮಹಿಮಾ ಗೀತೆಗಳಿವೆ. ಅಸ್ಪೃಶ್ಯತೆ, ಮತಭೇದ, ಮಾನವತೆ, ನಿರಾಶೆ, ನೋವು, ವಿಷಾದ ಹಾಗೂ ವೈಚಾರಿಕ ಕವನಗಳಿವೆ.

“ಬೇಡವೆ ನಮಗೂ ನೆಲ. ನೀರು, ಗಾಳಿ, ಬೆಳಕು
ನಿನ್ನೆ ನಿಮ್ಮದಾದಂತೆ ನಾಳೆ ನಮ್ಮದಾಗಲು”

ಇಲ್ಲಿ ಕವಿ ವರ್ಗ- ವರ್ಣ ಎಂದು ಸಾಮಾಜಿಕ ಅಸಮಾನತೆಯನ್ನು ಕುರಿತು ಪ್ರತಿಭಟಿಸಿದ್ದಾರೆ.

“ಅನ್ಯಾಯವನೆದುರಿಸಲೆನಗೆ ಹಣೆಗಣ್ಣನೀಡು
ಬರಿದೆ ಬಡಬಡಿಸಿದರೆ ಅದನಾರು ಕೇಳುವರು”

ಎಂದು ಸಿಡಿಲದನಿಯಲ್ಲಿ ಗುಡುಗುತ್ತಾರೆ. ಹೀಗೆ ಭಾವ ಭಾಷೆಗಳ ಸುಂದರ ಸಮ್ಮಿಲನದಂತೆ ತೋರುವ ಮೌನದೊಳಗಿನ ಮಾತುಗಳಲ್ಲಿ ದೇವರು ಮೋಡ ಆಕಾಶ ಚುಕ್ಕೆ ಚಂದ್ರಮರ ಜೊತೆ ನೆಲದ ಮರೆಯ ನಿಧಾನಗಳ ಕಡೆ ಕ್ಷಕಿರಣ ಹಾಯಿಸಿರುವುದು ಈ ಸಂಕಲನದ ಧನಾತ್ಮಕ ಅಂಶ.

ಕವಿಯ ಜೀವನ ಮತ್ತು ಸಾಧನೆ ನೆಲದ ಮರೆಯ ನಿಧಾನದಂತೆಯೇ ಸಾಗಿ ಬಂದಿದೆ. ಅವರ ಕಾವ್ಯ ಅಂತರ್ವಾಹಿನಿಯಾದ ಸರಸ್ವತಿಯೇ ಹೊರತು ಭೋರ್ಗರೆವ ಗಂಗಾ ಪ್ರವಾಹವಲ್ಲ. ಅವರ ಕಾವ್ಯ ಯೋಗ ಒಂದು ಸಾಧನೆ. ಅದರ ಅಂಗವಾಗಿ ವಿವಿಧ ಪ್ರಯೋಗಗಳು ಮೌನವಾಗಿ ಹರಿದು ಬಂದಿವೆ. 'ಸಾನೆಟ್' ಗಳಿಂದ ಕನ್ನಡ ಕಾವ್ಯಲೋಕವನ್ನು ಸಮೃದ್ಧಗೊಳಿಸಿದ್ದಲ್ಲದೆ ಆ ಪ್ರಕಾರಕ್ಕೆ ಹೊಸ ಮುಖವನ್ನು, ಹೊಳಪನ್ನು ನೀಡಿದ ಕವಿ ರಾಗೌ. ಕಾವ್ಯ ಲಕ್ಷಣ ಮತ್ತು ಸ್ವತಂತ್ರ ಲಕ್ಷ್ಯಗಳ ನಡುವಿನ ಸಾಧ್ಯತೆಗಳನ್ನು ಅವರ ಪ್ರಯೋಗಗಳಲ್ಲಿ ಕಾಣಬಹುದು. ವ್ಯಕ್ತಿ ನಿಷ್ಠ ಭಾವಾಭಿವ್ಯಕ್ತಿಯ ಪ್ರಕಾರವೆಂದು ಭಾವಿಸ ಲಾಗುವ ಸುನೀತದಲ್ಲೂ ಸಾಮಾಜಿಕ ಮೂಲದ ವೇದನೆಯನ್ನು ಹುದುಗಿಸಿದ ರೀತಿ ಅವರ ಕಾವ್ಯ ಸ್ವರೂಪದ ವೈಶಿಷ್ಟ್ಯವನ್ನು ತೋರಿಸುವಂತಿದೆ.

ಅನ್ವೇಷಕನಾಗಿ, ಮೂಕನಾಗಿ ಕರಾಳ ದಿನಗಳಲ್ಲಿ ಆಶಾಕಿರಣವನ್ನು ಹುಡುಕುವ ಮಾನವನಾಗಿ,ಒಂಟಿ ದನಿಯನ್ನು ಉಳಿಯಲಿಚ್ಛಿಸುವ ಮೌನಿಯಾಗಿ, ನಾಳೆಗಳು ನಮ್ಮವು ಎಂಬ ಭರವಸೆಯನ್ನು ಹೊತ್ತ ತಾತ್ತ್ವಿಕನಾಗಿ ಕವಿ 'ನೆಲದ ಮರೆಯ ನಿಧಾನದಲ್ಲಿ ಕಾಣುತ್ತಾರೆ.

"ಬೇಡವೆ ನಮಗೂ ನೆಲನೀರುಗಾಳಿ ಬೆಳಕು.
ಸುಂದರ ಮೋಡ, ಮಳೆಬಿಲ್ಲು, ಕೋಗಿಲೆಹಾಡು
ಇದ್ದರೂ ಇವೆಲ್ಲ, ಕಣಿವೆಯಾದೆವು ನಾವು; ನೋವು
ಗವಿಯಿಂದೆದ್ದು ಬಂದೆವು, ನಾಳೆಗಳು ನಮ್ಮವು."[1]

ಕಾಲದ ಸಂಕೇತಗಳನ್ನು ಗ್ರಹಿಸಿ, ಓದುಗರ ನಾಡಿಮಿಡಿತವನ್ನು ಗೌರವಿಸಿ ವಸ್ತುರೂಪಗಳ ನಾನಾ ಸಾಧ್ಯತೆಗಳನ್ನು ಅರಿತು ಪ್ರಯೋಗಿಸುವ ಜಾಣ್ಮೆ ಈ ಕವಿಗಿದೆ. ಇತ್ತೀಚಿನ ಕಾವ್ಯದ ಒಂದು ವಿಶಿಷ್ಟ ಅಭಿವ್ಯಕ್ತಿ ರೂಪ ಮಿನಿಕವನ. ವಚನ, ಮುಕ್ತಕ, ಭಾವಗೀತೆ, ಚುಟುಕು

ಮುಂತಾದ ಹೆಸರುಗಳಿಂದ ಮಿಂಚಿನ ವೇಗದಲ್ಲಿ ಚುರುಕು ಮುಟ್ಟಿಸಿ, ಕುಶಾಗ್ರಮತಿಯ ಕವನ ಶಕ್ತಿಗೆ ನಿದರ್ಶನವಾಗಿ ಮೂಡಿಬರುವುದು ಮಿನಿಕವನ.

ಅಲ್ಪಾಕ್ಷರಗಳಲ್ಲಿ ಅನಲ್ಪಾರ್ಥ ರಚನೆ ಕವಿಯ ವಿವೇಕಕ್ಕೆ ಒರೆಗಲ್ಲೆಂಬ ಹಿರಿಯ ನುಡಿಗೆ ಉದಾಹರಣೆಯಾಗಿ ರಾಗೌ ಅವರ 'ಮಾತು ಮೌನಗಳ ನಡುವೆ' ಅಭಿವ್ಯಕ್ತವಾಗಿದೆ. ಕವಿಯ ಅನುಭವಕ್ಕೆ ಬಂದ ಅನೇಕ ವಿಚಾರಗಳು ಮಿತ್ತಾಕ್ಷರಿಗಳಾಗಿ ಈ ಸಂಕಲನದಲ್ಲಿ ಸ್ಥಾನ ಪಡೆದಿವೆ. ಕವಿಯ ಜೀವನದರ್ಶನ, ಸ್ನೇಹ ಸಂಬಂಧಗಳು, ಲೋಕ ವ್ಯವಹಾರ ಮಾನವ ಸ್ವಭಾವ ಮುಂತಾದ ಹಲವು ವಿಷಯಗಳು ಇಲ್ಲಿಯ ಕವನಗಳಿಗೆ ವಸ್ತುವಾಗಿ ಬದುಕಿನಲ್ಲಿ ಬದಲಾಗದ ಸಂಗಾತಿಗಳು ಇಬ್ಬರು; ಒಂದು ಪುಸ್ತಕ, ಮತ್ತೊಂದು ಪ್ರಕೃತಿ! ಎನ್ನುವ ಈ ಕವಿಯ ಜೀವನ ದರ್ಶನ ಮುಕ್ತಕ ರೂಪದಲ್ಲಿ ಹೊರ ಹೊಮ್ಮಿದೆ.

"ಕವನ ರಚನೆಗೆ ಖುಷಿ
ತಾ ಕಾರಣವಾಗದು;
ವಿಹಿತವಲ್ಲ ಅಸ್ವಸ್ಥಮನ ಕೂಡ
ಸ್ವಸ್ಥ ಅಸ್ವಸ್ಥಗಳ ನಡುವಣ
ಸಂಕೀರ್ಣ;
ಬರಿಯ ಬುದ್ಬುದವಲ್ಲ
ಮನಮಂಥನ!"

ಎನ್ನುವ ಕವಿ ಬಣ್ಣದ ಕನಸನ್ನು ಕಾಣುವುದರ ಜೊತೆಗೆ 'ಯಾತನಾಯಾತ್ರೆ'ಯನ್ನು ಅಷ್ಟೇ ಪ್ರಾಮಾಣಿಕವಾಗಿ ಕೈಗೊಳ್ಳುತ್ತಾನೆಂಬುದು ಸ್ಪಷ್ಟ. ಪ್ರಾಮಾಣಿಕ ಮನಸ್ಸಿನ 'ಮೊರೆ' ಎಂದೆಂದಿಗೂ ಸದಾಶಯದಿಂದಲೇ ಕೂಡಿರುತ್ತದೆ.

“ಮರುಳು ಗಾಡಲಿ ನಡೆದು ಬಾಯಾರಿದವನಿಗೆ

ಓಯಸ್ಸಿಗಳನು ಸ್ವಲ್ಪ ಜಾಸ್ತಿ ಇರಿಸಿ;

ಕಷ್ಟದಲ್ಲಿರುವಗೆ ನಷ್ಟ ರುಚಿಯಾಗದ ಹಾಗೆ

ಒಂದಿಷ್ಟು ಉಪ್ಪಿನ ಕಾಯನಾದರೂ ಬಡಿಸು”!

‘ಮಾತು ಮೌನಗಳ ನಡುವೆ’ ಕವನ ಸಂಕಲನವು ಅನೇಕ ಹನಿ ಕವನಗಳ ಸಂಗ್ರಹವಾಗಿದೆ. ಕವಿಯ ಅನುಭವಗಳನ್ನು ೪–೫ ಸಾಲುಗಳಲ್ಲಿ ಕಟ್ಟಿ ತೋರಿಸಿದ್ದಾರೆ. ಕಾವ್ಯ, ಜನಪದ ಅಪರಂಜಿ, ಮಾತು ಮುಂತಾದ ಹನಿಗವನಗಳು ಸಾಮಾಜಿಕ ಸ್ವರೂಪದ್ದಾಗಿದೆ.

“ಕಾವ್ಯ ಎನ್ನುವುದು

ಕೇವಲ ಮಾತಲ್ಲ

ಯಾ ಮೌನವೂ ಅಲ್ಲ:

ಮಾತು ಮೌನಗಳ ನಡುವೆ

ತೆರೆದು ಕೊಳ್ಳುವ

ಆತ್ಮದ ಅವಲೋಕನ!”

ಕಾವ್ಯ ಎಂದರೇನು ಎಂಬ ಪ್ರಶ್ನೆಗೆ ಮೇಲಿನ ಕವನದ ಸಾಲುಗಳೇ ಸ್ಪಷ್ಟ ಉತ್ತರವನ್ನು ನೀಡುತ್ತದೆ. ಕಾವ್ಯ ಎನ್ನುವುದು ಆತ್ಮದ ಅವಲೋಕನ ವ್ಯಕ್ತಿಯ ಅಂತರಂಗದ ಪರಿವೀಕ್ಷಣೆ ಎಂಬುದು ಕವಿಯ ಬಿನ್ನಹವಾಗಿದೆ.

“ಮನಸಿನೊಳಗೆ ವಿವೇಕ ಮೂಡಿದರೆ

ಮಾತು ಅಂತೆ ಮುತ್ತಾಗುವುದು!”

ಇದು ಅಂತರಂಗ ಹಾಗೂ ಬಾಹಿರಂಗ ಶುದ್ಧಿಯನ್ನು ಕುರಿತಾಗಿದ್ದು, ಮಾತಿನ ಮಹತ್ವವನ್ನು ಸಾರುತ್ತದೆ. ಈ ಕವನ ಸಂಕಲನದಲ್ಲಿ ರಾಗೌ ಅವರು ಬದುಕಿನ ಎಲ್ಲ ಹಂತಗಳನ್ನು ಪರಿಶೀಲಿಸಿ ವಾಸ್ತವಿಕತೆಯನ್ನು ಪ್ರತಿಬಿಂಬಿಸಿದ್ದಾರೆ. ಇಲ್ಲಿ ಸೃಜನಶೀಲ ಮನಸ್ಸಿನ ತುಡಿತವಿದೆ.

'ಮಾತು ಮಾರ್ಗವು ಸಹ ಹನಿಗವನಗಳಾಗಿದೆ. ಇದು ೨೦೦೨ರಲ್ಲಿ ಪ್ರಕಟವಾಯಿತು. ಮೌನ, ಜೀವನ, ಗುರಿಶುದ್ಧಿ, ಮುಖಭಾವ ಬೆಳೆ ಮುಂತಾದವು ರಾಗೌ ಅವರ ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿದೆ.

[೭]"ನರನ ವ್ಯಕ್ತಿತ್ವ ರೂಪಣ
ನಿರಾಕ್ಷೇಪಣ ಜೀವನಕೆ
ಒಂದು ಗುರುತ್ವಾಕರ್ಷಣೆ!"[೭]

ವ್ಯಕ್ತಿಗೆ ವ್ಯಕ್ತಿತ್ವವೆಂಬುದು ಎಷ್ಟು ಮುಖ್ಯವಾದುದು ಎಂಬುದನ್ನು 'ವ್ಯಕ್ತಿತ್ವ' ಕವನದ ಮೂಲಕ ತಿಳಿಸಿದ್ದಾರೆ.

ರಾಗೌ ಅವರ ಆರದಿರಲಿ ಈ ಬೆಳಕು. ಕವನ ಸಂಕಲನವು ೨೦೦೨ ರಲ್ಲಿ ಪ್ರಕಟ ವಾಯಿತು. ಹಚ್ಚಿಟ್ಟ ಹಣತೆಯ ನಿಚ್ಚ ಜಾಗರವಿರುವ ತೋಕ್ಕಲ್ಲದೆ ದ್ವೇಷಕ್ಕೆ ಇಂಭಾಗದ, ಮೇರೆ ಮೀರದಂತೆ ಹೃದಯವನ್ನು ಹಿಡಿದಿಡಬಲ್ಲ ಕ್ಷೋಭೆಗೊಳ್ಳದ ಶಾಂತ ಮನಸ್ಸನ್ನು ಹೊಂದಿದ ಕವಿ ಬದುಕಿನಿಂದ ವಿಮುಖನಾಗಲಾರ; ತೊಗಟೆ ತೆಗೆದಂತೆ ಅದು ಸಿಹಿ. ವಾದವಿವಾದಾಗಳಲ್ಲಿ ಜಟಿಲವಾಗುವ ತತ್ವವಿಚಾರಗಳನ್ನು ಬಿಟ್ಟು ಸಂತರ ಸಂವಾದದ ಹಾದಿಯನ್ನು ಕಾಣಬಲ್ಲ ಕವಿಯ ಮಾಗಿದ ಮನಸ್ಸು ಪ್ರಸ್ತುತ ಸಂಕಲನದಲ್ಲಿ ಗೋಚರವಾಗುತ್ತದೆ. ಕನ್ನಡ ಕಾವ್ಯ ದೇವಿಯ ಗರ್ಭಗುಡಿಗೆ ಈ ಸೊಡರನ್ನು ಹಚ್ಚಿದ್ದಾರೆ. ಜಾಜ್ವಲ್ಯಮಾನವಾಗಿ ಬೆಳಗುತ್ತಿರುವ ಜ್ಯೋತಿಗಳ ಜೊತೆಗೆ ಈ ಜ್ಯೋತಿ ಬೆಳಗುತ್ತಿದೆ.

ಸಂಕಲನದ ದೀರ್ಘ ಪದ್ಯಗಳಲ್ಲಿ ಮುಕ್ತ ಛಂದಸ್ಸಿನ ಸುಲಲಿತ ನಡೆಯಿದ್ದು ರಾಗೌ ತಮ್ಮ ಭಾಷಾ ಕೌಶಲದಿಂದ ಅತ್ಯಂತ ಮನೋಹರವಾಗಿ ಕಾವ್ಯ ಕಟ್ಟಿದ್ದಾರೆ.

'ಅನಾಗತ' ಕವನ ಸಂಕಲನದ ಪದ್ಯಗಳು ಮಾನವನ ಗೋಜಲುಗಳಿಗೆ ಪರಿಹಾರ ಹುಡುಕುವ ಪ್ರಯತ್ನ ಮಾಡಲಾಗಿದೆ. ರಾಗೌ ಕಾವ್ಯವು ನೊಂದ ಆತ್ಮಗಳಿಗೆ ಸಾಂತ್ವಾನಗಳನ್ನು ನೀಡುತ್ತದೆ. 'ಅನಾಗತ' ಕವನ ಸಂಕಲನದಲ್ಲಿ ಪುಟವೊಂದಕ್ಕೆ ಒಂದು ಕವಿತೆಯಂತೆ ಒಟ್ಟು ತೊಂಬತ್ತಾರು ಕವಿತೆಗಳಿವೆ. ಇವುಗಳೆಲ್ಲ ಹದಿನೆಂಟು ಸಾಲಿನಿಂದ ಇಪ್ಪತ್ತನಾಲ್ಕು ಸಾಲಿನ ಮಿತಿಯಲ್ಲಿವೆ. ಅನಾಗತ ಸಂಕಲನದ ಮೊದಲನೆಯ ಕವಿತೆ 'ವೀಣೆಯ ನುಡಿಸೆಂದೆ' ಎಂಬುದು ಭಕ್ತ–ಭಗವಂತನ ಜೊತೆ ನಡೆಸುವ ಏಕಮುಖ ಸಂವಾದದ ರೂಪದಲ್ಲಿ ರೂಪುಗೊಂಡಿದೆ.

"ನೀನೆನಗೆ ವೀಣೆಯನು ಕೊಟ್ಟು ನುಡಿಸೆಂದೆ
ನಾನದನು ನುಡಿಸಲಾರದೆ ನಿನ್ನತ್ತ ನೋಡಿದೆ."

ಈ ಕವನಗಳಲ್ಲಿ ಸಂಕೇತ, ಪ್ರತಿಮೆಗಳು ಹೆಚ್ಚಾಗಿ ಬಳಕೆಯಾಗಿದೆ. ಕೆಲವು ಸೂತ್ರ ರೂಪದಲ್ಲಿ ಮತ್ತೆ ಕೆಲವು ಗಾದೆ, ಬಿಡಿ ಮುತ್ತಿನ ರೂಪದಲ್ಲಿ ಇದೆ. ಇದರಲ್ಲಿ ಶುದ್ಧವಾದ ಕಾವ್ಯ, ಅನುಭಾವಲೋಕ ಮತ್ತು ಸಾಮಾಜಿಕ ಕಳಕಳಿ ರೂಪುಗೊಂಡಿದೆ.

ರಾಗೌಅವರ ಸೃಜನಶೀಲ ಕೃತಿಗಳಲ್ಲಿ "ದೊರೆ ದುರ್ಯೋಧನ" ನಾಟಕವು ಒಂದು. ಇದು ಗದ್ಯ ಮತ್ತು ಪದ್ಯ ಮಿಶ್ರಿತವಾದ ಕೃತಿ. ಇದು ನಾಟಕ ಪ್ರದರ್ಶನಕ್ಕೆ ಅಲ್ಲದೆ, ಸಹೃದಯರು ಓದಲು ಆಕರ್ಷಣೀಯವಾದ ಪರಿಣಾಮಕಾರಿ ನಾಟಕವಾಗಿದೆ. ಈ ನಾಟಕವು ದುರ್ಯೋಧನನ ಜೀವನದ ವಿವಿಧ ವೃತ್ತಾಂತಗಳನ್ನು ವಿಶ್ಲೇಷಿಸುತ್ತಾ ಸಮಗ್ರ

ಭಾರತದ ಒಳನೋಟವನ್ನು ನೀಡುತ್ತದೆ: ಪ್ರತಿನಾಯಕನನ್ನು ನಾಯಕನಾಗಿ ಮಾಡಿ ಓದುಗರ ಮನದಲ್ಲಿ ಆತನಿಗೆ ಉತ್ತಮ ಸ್ಥಾನ ನೀಡುವಲ್ಲಿ ರಾಗೌ ಯಶಸ್ವಿಯಾಗಿದ್ದಾರೆ. ಹಳೆಯ ವಸ್ತುವಿಗೆ ಹೊಸ ರೂಪವನ್ನು ರಾಗೌ ನೀಡಿದ್ದಾರೆ.

ನಾಟಕದ ಶೀರ್ಷಿಕೆಯೇ ಸೂಚಿಸುವಂತೆ, ದುರ್ಯೋಧನ ನಾಟಕದ ಕೇಂದ್ರಬಿಂದು. ಆತನ ವ್ಯಕ್ತಿತ್ವದರ್ಶನ ಇಡೀ ನಾಟಕ ರಚನೆಯ ಉದ್ದೇಶ. ಆತನ ಉದಾತ್ತ ಚರಿತೆ ಹೇಗೋ, ಹಾಗೆ ಛಲಬಿಡದ ಪರಿಸರದಲ್ಲಿ ಎದ್ದು ನಿಲ್ಲುವ ವಿಷಾದದ ಗೆರೆಗಳು ಮನಮಿಡಿವ ಸಂಗತಿಗಳಾಗಿ ಮಿಂಚುತ್ತವೆ. ಇದೊಂದು ದಾರುಣ ವ್ಯಕ್ತಿಚಿತ್ರಣ. ತನ್ನ ತಪ್ಪಿನ ಅರಿವಾದಾಗ ಅದರ ಮುಂದುವರಿಕೆ ತರವಲ್ಲ ಎನ್ನುವ ಆತ್ಮಾವಲೋಕನ ಈ ಪಾತ್ರದ ಮಹೋನ್ನತಿಯ ಚರಮ ಬಿಂದು. ಭಾವುಕತೆಯ ಜೊತೆಗೆ ಆತ್ಮ ವಿಮರ್ಶೆಯ ಸೂಕ್ಷ್ಮ ಒಳನೋಟವನ್ನಿಲ್ಲಿ ಕಾಣಬಹುದಾಗಿದೆ.

ನಾಟಕದ ಕೊನೆಯಲ್ಲಿ ದುರ್ಯೋಧನನು ಪುತ್ರ ಸುಮುಖನಿಗೆ 'ಶಸ್ತ್ರಾಸ್ತ್ರ ಪೈಪೋಟಿಯ ಕಾಲ ಮುಗಿಯಿತು ಮಗೂ ಮುಂದೇನಿದ್ದರೂ ಅದರ ಉಪಶಮನ ಕಾಲ! ಶಸ್ತ್ರಾಸ್ತ್ರಗಳಲ್ಲಿ ಆಟದ ಸಾಮಾನುಗಳಾಗಬೇಕೇ ಹೊರತು, ಹೋರಾಟದ ಸಾಧನಗಳಾಗಬಾರದು ಎಂದು ಹೇಳುತ್ತಾ ಭಾನುಮತಿಯ ತೊಡೆಯ ಮೇಲೊರಗಿ ನಿಶ್ಚಿಂತೆಯ, ನೆಮ್ಮದಿಯ ಕೊನೆಯುಸಿರೆಳೆವ ದೃಶ್ಯವಂತೂ ಜೀವನ ದರ್ಶನದ ಕನ್ನಡಿಯಂತಿದೆ.

ನಾಟಕದ ಉದ್ದಕ್ಕೂ ವಿಷಾದ ಛಾಯೆ ಇದೆ. ದುರ್ಯೋಧನನ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಹಲವಾರು ಉದಾತ್ತವಾದ ಚಿತ್ರಣ ಇಲ್ಲಿ ನೋಡಬಹುದು. ಮರಣವನ್ನು ಅಪ್ಪಿದ ವೀರರಿಗೆ ಸಂತಾಪ ಸೂಚಿಸುವ ಸಮಯದಲ್ಲಿ ದುರ್ಯೋಧನನ ಪಾತ್ರದ ಔದಾರ್ಯಗುಣಕ್ಕೆ ಉಜ್ವಲ ನಿದರ್ಶನವಾಗಿದೆ. ಮೂಲ ಭಾರತದಲ್ಲಿ ಮೂಲೆ ಗುಂಪಾಗಿದ್ದ

ಭಾನುಮತಿ ಪಾತ್ರ ರಾಗೌ ಅವರ ದೃಷ್ಟಿಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದೆ. ಈ ಪಾತ್ರ ಸಂಸಾರಿಕ ಬದುಕಿನ ಅನೇಕ ಉಬ್ಬುತಗ್ಗುಗಳಿಗೆ ಸಾಕ್ಷಿಭೂತವಾಗಿದೆ.

ರಾಗೌ ಅವರು ಬಿ.ಎಂ.ಶ್ರೀ ಅವರ 'ಗದಾಯುದ್ಧ' ನಾಟಕ, ಭಾಸನ ಭಟ್ಟನಾರಾಯಣ ಮೊದಲಾದವರ ನಾಟಕಗಳು ಸೋಫೋಕ್ಲಿಸ್‌ನ 'ದೊರೆ ಈಡಿಪಸ್' ನಾಟಕಗಳನ್ನು ರಾಗೌ ಅಭ್ಯಾಸ ಮಾಡಿದ್ದಾರೆ. ಇವೆಲ್ಲಕ್ಕಿಂತ ಭಿನ್ನ ನೆಲೆಯಲ್ಲಿ ಚಿಂತಿಸಿ ದುರ್ಯೋಧನನ ಮಾನವೀಯ ನೆಲೆಗಳನ್ನು ಭಾನುಮತಿಯ ಅಂತಃಕರಣಶೀಲತೆ ಹಾಗೂ ಒಳಕುದಿತಗಳನ್ನು ಅಭಿವ್ಯಕ್ತಿಸಿ ಸ್ವಾರ್ಥ ರಾಜಕಾರಣವನ್ನು ಸಾಮಾನ್ಯ ನೆಲೆಯಲ್ಲಿ ವಿವೇಚಿಸುವ ದೃಷ್ಟಿಯಿಂದ ರಾಗೌ ಈ ನಾಟಕವನ್ನು ರಚಿಸಿದ್ದಾರೆ.

ನಿರ್ಲಕ್ಷ್ಯಕ್ಕೆ ಒಳಗಾದ ಪಾತ್ರಗಳು ಈ ನಾಟಕದಲ್ಲಿ ಜೀವ ತುಂಬಿ ನಿಂತಿದೆ. ಚಂದ್ರಾ-ಚಿತ್ರಾ, ಭೈರವಮಿತ್ರ- ನೀಲ ಮೊದಲಾದ ಪಾತ್ರಗಳು ಕನ್ನಡ ನಾಟಕ ಪರಂಪರೆಯಲ್ಲಿ ಪ್ರಥಮ ಬಾರಿಗೆ ಕಾಣಿಸುತ್ತದೆ. ಈ ಪಾತ್ರಗಳು ಸಾಮಾನ್ಯ ಜನರ ಪ್ರತಿನಿಧಿಗಳಾಗಿದ್ದಾರೆ. ಮರೆಯಾದ ಪಾತ್ರಗಳಲ್ಲಿ ಉದಾತ್ತವಾದ ಶೌಚಾಗುಣವನ್ನು ಹುಡುಕುವ ಪ್ರಯತ್ನ ರಾಗೌ ಮಾಡಿದ್ದಾರೆ. ಸತ್ಯಂತಪ ಋಷಿ ಪ್ರಕರಣ, ಸರೋವರ ಪ್ರವೇಶ ಪ್ರಸಂಗಗಳು ಮನೋಜ್ಞವಾಗಿ ಚಿತ್ರಿತವಾಗಿದೆ. ಸನ್ನಿವೇಶ ನಿರ್ಮಾಣದಲ್ಲಿ ನೈಜತೆ ಪ್ರತಿಬಿಂಬ ಮೊಳಕೆಯೊಡೆದಿದೆ. ಇದಕ್ಕೆ ಭಾನುಮತಿ ಸಖಿ, ದುರ್ಯೋಧನ-ಭಾನುಮತಿ, ಸಂಜಯ-ದುರ್ಯೋಧನ ನಡುವಿನ ಸಂಭಾಷಣೆ ಉತ್ತಮ ಉದಾಹರಣೆಯಾಗಿದೆ.

[೮]ಮೇಳದ ಶಕ್ತಿಯುತ ಅಳವಡಿಕೆ ಸಂವಾದ ಪರಿವರ್ತನೆಗೆ ಕತೆಯ ಓಟಕ್ಕೆ ಪ್ರಭಾವಶಾಲಿ ತಂತ್ರವಾಗಿ ಈ ನಾಟಕದಲ್ಲಿ ಬಳಕೆಯಾಗಿದೆ. ವಿವಿಧ ದೃಶ್ಯಗಳ ನಡುವಿನ ಸಾರ್ಥಕ ಸೇತುವಾಗಿ, ಪ್ರಸಂಗಗಳ ನಿರೂಪಣೆಯಲ್ಲಿ ಜೀವಂತಿಕೆ ತರುವಲ್ಲಿ ಯಶಸ್ಸನ್ನು ಸಾಧಿಸಿದೆ. ಇಲ್ಲಿನ ಮೇಳವು ಕೇವಲ ಸಮಾಚಾರವನ್ನು ವರದಿ ಮಾಡುವಷ್ಟಕ್ಕೆ ಸೀಮಿತವಾಗದೆ,

ಘಟಿಸಲಿರುವ ಸಂಗತಿಗಳಿಗೆ ಅನುರೂಪ ಆವರಣವನ್ನು ತಕ್ಕ ಮಟ್ಟಿಗೆ ಸಜ್ಜುಗೊಳಿಸುವ ಜವಾಬ್ದಾರಿ ಹೊಂದಿದೆ. ೮

ಮೈತ್ರೇಯರ ಶಾಪ ಈ ಪ್ರಸಂಗ ವ್ಯಾಸಭಾರತದ ಅರಣ್ಯಪರ್ವತದಲ್ಲಿಯೇ ಬರುತ್ತದೆ. ವನವಾಸದಲ್ಲಿದ್ದ ಪಾಂಡವರನ್ನು ಧ್ವಂಸಮಾಡುವ ಸಲುವಾಗಿ ದುರ್ಯೋಧನಾದಿಗಳು ಹೊರಡುವ ಸ್ಥಿತಿಯಲ್ಲಿದ್ದಾಗ ಮೈತ್ರೇಯರು ಅಲ್ಲಿಗೆ ಬರುತ್ತಾರೆ. ಪಾಂಡವರಿಗೆ ದ್ರೋಹ ಮಾಡದೆ ನ್ಯಾಯಯುತವಾಗಿ ನಡೆದುಕೊಳ್ಳಬೇಕೆಂದು ನೀತಿ ಮಾತುಗಳನ್ನು ಅವರು ಹೇಳುತ್ತಾರೆ. ಆಗ ದುರ್ಯೋಧನ ತೊಡೆತಟ್ಟುತ್ತಾ ಮುಗುಳು ನಗುವನು ಹೀಗೆ ತನ್ನ ಮಾತನ್ನು ಗರ್ವದಿಂದ ನಿರ್ಲಕ್ಷಿಸಿ ತೊಡೆತಟ್ಟಿದಕ್ಕಾಗಿ ಮುಂದೆ ಮಹಾಯುದ್ಧ ಸಂಭವಿಸುತ್ತದೆಂದೂ, ಅವರಲ್ಲಿ ಭೀಮನು ದುರ್ಯೋಧನನ ತೊಡೆಗಳನ್ನು ಮುರಿಯುತ್ತಾನೆಂದೂ ಮೈತ್ರೇಯ ಶಾಪ ಕೊಡುವರು. ಇದನ್ನು ನಾಟಕದಲ್ಲಿ ಕೃಷ್ಣ ಹೇಳುವ ರೀತಿಯಲ್ಲಿ ಬಳಸಲಾಗಿದೆ. ಅದೂ ದುರ್ಯೋಧನ ಅವಸಾನದ ಅಂಚಿನಲ್ಲಿದ್ದಾಗ ಈ ಪ್ರಸಂಗ ತರಲಾಗಿದೆ.

ಸತ್ಯಂತಪ ಪ್ರಸಂಗ ವ್ಯಾಸ ಭಾರತದಲ್ಲಿ ಬಂದಂತ್ತಿಲ್ಲ ಪಂಪಭಾರತದಲ್ಲಿ ಮಾತ್ರ ಇದರ ಉಲ್ಲೇಖವಿದೆ. ಪಂಪ ಕವಿ ಇದನ್ನು ಯಾವ ಆಕಾರದಿಂದ ತೆಗೆದುಕೊಂಡನೊ ತಿಳಿಯದು. ಪಂಪಭಾರತದ ನವಮಾಶ್ವಾಸದಲ್ಲಿ ಈ ಪ್ರಕರಣವಿದೆ. ಕರ್ಣನಿಗೆ ಅವನ ಜನ್ಮ ರಹಸ್ಯವನ್ನು ಹೇಳುವಾಗ ಶ್ರೀಕೃಷ್ಣನೇ ಇದರ ಪ್ರಸ್ತಾಪ ಮಾಡುತ್ತಾನೆ. ಗಂಗಾನದಿಯ ತೀರದಲ್ಲಿ ಬೇಟೆಯಾಡುವಾಗ, ಕರ್ಣ ಮತ್ತು ದುರ್ಯೋಧನರು ಸತ್ಯಂತಪ ಎಂಬ ದಿವ್ಯ ಜ್ಞಾನಿಗಳ ಆಶ್ರಮಕ್ಕೆ ಬರುವರು. ಅವರು ಮುನಿಗೆ ನಮಸ್ಕರಿಸಿದಾಗ, ಆ ಮುನಿ ಕುಳಿತುಕೊಳ್ಳಲು ಮೊದಲು ಕರ್ಣನಿಗೆ ಆಸನ ತೋರುವರು. ಆಗ ದುರ್ಯೋಧನ ಕರ್ಣನಿಗೆ ಹೋಗಲು ಹೇಳಿ, "ಆನಿರೆ ನೀಮಿದೇಕೆ ದಯೆಗೆಯ್ದಿರೊ ಮೀಂಗುಲಿಗಂಗೆ" ಎಂದು ಆ ತಪಸ್ವಿಯನ್ನು ಕೇಳುವನು. ಆಗ ಸತ್ಯಂತಪರು ಇದ್ದ ವಿಷಯವನ್ನೆಲ್ಲ

ಹೇಳಿದರೆಂದೂ, ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವುದಾಗಿ ದುರ್ಯೋಧನ ನಿರ್ಧರಿಸನೆಂದೂ ಪಂಪಕವಿ ಬರೆಯುತ್ತಾನೆ. ಕರ್ಣನನ್ನು ಭೇದಿಸುವ ಭಾಗವಾಗಿಯೇ ಈ ಪ್ರಸಂಗ ಬಂದಿರುವುದು ಸ್ಪಷ್ಟ. ನಾಟಕದಲ್ಲಿ ಸಂಜಯನಿಗೆ ದುರ್ಯೋಧನನೇ ಹೇಳಿದಂತೆ ಚಿತ್ರಿತವಾಗಿದೆ. ಎರಡರಲ್ಲೂ ಈ ಪ್ರಕರಣ ಬಂದಿರುವ ಸಂದರ್ಭಗಳು ಬೇರೆ ಬೇರೆಯಾಗಿದ್ದು, ಪರಿಣಾಮಗಳೂ ಬೇರೆಯಾಗಿವೆ.

ಅಶ್ವತ್ಥಾಮನ ತಲೆಯಲ್ಲಿ ಹುಟ್ಟಿನಿಂದಲೇ ಒಂದು ರತ್ನವಿತ್ತು. ಅಶ್ವತ್ಥಾಮನು ಉಪಪಾಂಡವರನ್ನು ಕೊಂದಾಗ ದುಃಖಿತೆಯಾದ ದ್ರೌಪದಿ ಈ ಶಿರೋರತ್ನವನ್ನು ತಂದುಕೊಡಲು ಕೇಳುವಳು. ಭೀಮ ತರಲು ಹೊರಡುವನು. ಮುಂದಾಗಬಹುದಾದ ಅನಾಹುತವನ್ನು ತಪ್ಪಿಸಲು ಶ್ರೀಕೃಷ್ಣ, ಧರ್ಮರಾಯ, ಅರ್ಜುನಾದಿಗಳೂ ಹಿಂಬಾಲಿಸುವರು. ಇವರನ್ನು ಕಂಡ ಅಶ್ವತ್ಥಾಮ ಹುಲ್ಲು ಕಡ್ಡಿಯನ್ನು ಅಭಿಮಂತ್ರಿಸಿ ದಿವ್ಯಾಸ್ತ್ರವಾಗಿ ಬಿಡುವನು. ಅರ್ಜುನ ಪ್ರತಿದಿವ್ಯಾಸ್ತ್ರವನ್ನು ಬಿಡುವನು. ವ್ಯಾಸ ನಾರದರು ಮಧ್ಯ ಪ್ರವೇಶಿಸಿ ಇಬ್ಬರು ಅಸ್ತ್ರಗಳನ್ನು ಹಿಂತೆಗೆದುಕೊಳ್ಳಲು ಹೇಳುವರು. ಅರ್ಜುನ ಹಿಂತೆಗೆದುಕೊಂಡರೂ, ಅಶ್ವತ್ಥಾಮ ಹಾಗೆ ಮಾಡಲಿಲ್ಲ. ವ್ಯಾಸರು ಮತ್ತೂ ಒತ್ತಾಯಿಸುತ್ತಾ. ಅಶ್ವತ್ಥಾಮ ತನ್ನ ತಲೆಮಣಿಯನ್ನು ಕೊಡಬೇಕೆಂದೂ, ಅಸ್ತ್ರವನ್ನು ಉಪಶಮಿಸಿಕೊಳ್ಳಬೇಕೆಂದು ಹೇಳುವರು. ಅಶ್ವತ್ಥಾಮ ಮಣಿಯನ್ನು ಕೊಟ್ಟರೂ ಅಸ್ತ್ರವನ್ನು ಉಪಶಮಿಸಿಕೊಳ್ಳಲಿಲ್ಲ. ಅದು ಉತ್ತರೆಯ ಗರ್ಭದಲ್ಲಿದ್ದ ಶಿಶುವನ್ನು ಹತ್ಯೆಮಾಡಿದ್ದೂ, ಶ್ರೀಕೃಷ್ಣ ಅದನ್ನು ಬದುಕಿಸಿದ್ದೂ, ಬೇರೆಯಕಥೆ. ಹೀಗೆ ಅಶ್ವತ್ಥಾಮ ತನ್ನ ತಲೆಯ ಮಣಿಯನ್ನು ಕಳೆದುಕೊಂಡು ಕಾಡಿನಲ್ಲಿ ಅಲೆಮಾರಿಯಾಗುವನು. ಈ ಪ್ರಸಂಗ ವ್ಯಾಸರಲ್ಲಿಯೇ ಬರುತ್ತದೆ. ಇದನ್ನು ಹಿನ್ನೆಲೆಯಾಗಿಟ್ಟುಕೊಂಡು ನಾಟಕದಲ್ಲಿ ಹೊಸ ಕಲ್ಪನೆಯನ್ನು ಮಾಡಲಾಗಿದೆ. ಅಶ್ವತ್ಥಾಮ ತನ್ನ ಮುಡಿಗೆ ಕೈಯಿಕ್ಕಿದಾಗ ಲಕ್ಷ್ಮೀ, ಅವನು ತನ್ನ ಮುಡಿಮಾಣಿಕ್ಯವನ್ನು ಕಳೆದುಕೊಳ್ಳಲಿ ಎಂದು ಶಾಪ ಕೊಡುವುದು ಒಂದು ನವೀನ ಕಲ್ಪನೆಯಾಗಿದ್ದು, ಎರಡು ವಿಷಯಗಳನ್ನು ಸೇರಿಸುವ ಹೊಳಹು ಮಾತ್ರವಾಗಿದೆ.

ಒಟ್ಟಾರೆ ಈ ನಾಟಕ ಹೊಸ ಯುಗಧರ್ಮದ ವಿವಿಧ ಮುಖಗಳನ್ನು ಅಳವಡಿಸಿಕೊಂಡು ನವ ಆಯಾಮವನ್ನು ಬಿತ್ತರಿಸುತ್ತಿದೆ. ಬದುಕಿನ ಬಗೆಗಿನ ಪ್ರೇಮ, ಸ್ನೇಹ, ದಾಂಪತ್ಯ, ಉದಾತ್ತ ವ್ಯಕ್ತಿತ್ವ, ಹಾಗೂ ಬಾಳ ಸಿರಿಯನ್ನು ಅರ್ಥೈಸುವ ಬಗೆಯು ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಈ ನಾಟಕ ರಾಗೌ ಅವರ ಕಲ್ಪನಾ ಶಕ್ತಿ ಹಾಗೂ ಸೃಜನಶೀಲ ಪ್ರತಿಭೆಗೆ ನಿದರ್ಶನವಾಗಿದೆ.

---

## ಅಡಿ ಟಿಪ್ಪಣಿ

[೧-೧], ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೧೭

[೨-೨], ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೬

[೩-೩], ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೧೪

[೪-೪], ಅಭಿಜಾತ, ಅಭಿನಂಧನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ ೪೨೩

[೫-೫]. ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೧೨೯

[೬-೬]. ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೨೮೨

[೭-೭]. ನಿನ್ನೆ ನಾಳೆಗಳ ನಡುವೆ, ರಾಗೌ,ಸಂವಹನ, ಪುಟ ೪೭೬

[೮-೮]. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ ೪೭೩

# ಅಧ್ಯಾಯ-೩

## ವಿಮರ್ಶಾಕೃತಿಗಳು

ರಾಗೌ ಅವರು ಕವಿ, ನಾಟಕಕಾರ,ಸಂಪಾದಕ, ಸಂಶೋಧಕ ಹಾಗೂ ವಿಮರ್ಶಕರಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಆದರೆ ರಾಗೌ ಅವರನ್ನು ಸಾಹಿತ್ಯ ವಲಯದಲ್ಲಿ ಹೆಚ್ಚಾಗಿ ಪರಿಗಣಿಸುವುದು ವಿಮರ್ಶಕ ಹಾಗೂ ಸಂಶೋಧಕರಾಗಿ ಎಂದರೆ ಅತಿಶಯೋಕ್ತಿಯಾಗಲಾರದು.

ರಾಗೌ ಈವರೆಗೆ ರಾಘವಾಂಕ, ಕಾವ್ಯಾನುಶೀಲತೆ, ಅವಗಾಹನ, ಕುವೆಂಪು ಸಾಹಿತ್ಯ ವಿಮರ್ಶನ, ದುರ್ಗಸಿಂಹ; ಪ್ರಾಸ್ತಾವಿಕ, ಸಮಾಕೀರ್ಣ,ಕೆ.ಎಸ್.ನರಸಿಂಹಸ್ವಾಮಿ, ಬಿ.ಎಂ.ಶ್ರೀಕಂಠಯ್ಯ ಮತ್ತು ಪ್ರಾಚೀನ ಕಾವ್ಯ ಚಿಂತನ ಎಂಬ ವಿಮರ್ಶಾ ಸಂಕಲನಗಳನ್ನು ಪ್ರಕಟಿಸಿದ್ದಾರೆ.

ಇವುಗಳಲ್ಲಿ ಸಂಕಲಗೊಂಡಿರುವ ಲೇಖನಗಳನ್ನು ವಿಮರ್ಶೆ, ಸಂಶೋಧನೆ ಎಂದು ಸ್ಥೂಲವಾಗಿ ವಿಭಾಗಿಸಿಕೊಳ್ಳಬಹುದು. ವಿಮರ್ಶಾ ಲೇಖನಗಳನ್ನು ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತವು, ಆಧುನಿಕ ಕನ್ನಡ ಸಾಹಿತ್ಯವನ್ನು ಕುರಿತವು, ವಿಮರ್ಶಾ ಗ್ರಂಥಗಳನ್ನು ಕುರಿತವು ಎಂದು ವಿಂಗಡಿಸಿ ಕೊಳ್ಳಬಹುದು. ಆಧುನಿಕ ಕನ್ನಡ ಸಾಹಿತ್ಯವನ್ನು ಕುರಿತ ಲೇಖನಗಳನ್ನು ಕುವೆಂಪು ಸಾಹಿತ್ಯಕ್ಕೆ ಸಂಬಂಧಿಸಿದವು, ಇತರ ಲೇಖಕರ ಸಾಹಿತ್ಯಕ್ಕೆ ಸಂಬಂಧಿಸಿದವು ಎಂದು ಮತ್ತೆ ವಿಂಗಡಿಸಿಕೊಳ್ಳುವುದು ಸಾಧ್ಯ. ಸಾಹಿತ್ಯೇತರ ವಿಷಯಗಳಿಗೆ ಸಂಬಂಧಿಸಿದ ಪ್ರಸ್ತಕವೊಂದರ ವಿಮರ್ಶೆಯು ತಮಿಳು ಸಾಹಿತ್ಯ ಕೃತಿಯೊಂದನ್ನು ಕುರಿತ ವಿಮರ್ಶೆಯೂ ಈ ಸಂಕಲನಗಳಲ್ಲಿ ಸೇರಿವೆ.

ಕಾವ್ಯಾನುಶೀಲನ ರಾಗೌ ಅವರ ಚೊಚ್ಚಲ ವಿಮರ್ಶಾ ಕೃತಿ. ಇದರಲ್ಲಿ 'ರಾಮಾಯಣಗಳಲ್ಲಿ ಸೀತೆಯ ಜನನ ವೃತ್ತಾಂತ' ಲೇಖನವು ತೌಲನಿಕ ದೃಷ್ಟಿಯಿಂದ ಚರ್ಚಿತವಾಗಿದೆ. ಉಳಿದಂತೆ ನಾಲ್ಕು ಲೇಖನಗಳು ಅವಲೋಕನ ಮತ್ತು ವಿಮರ್ಶೆಯ ಶಿಸ್ತನ್ನು ಪಡೆದುಕೊಂಡಿದೆ. ಪುರಂದರದಾಸರು ಮತ್ತು ಅವರ ಕೀರ್ತನೆಗಳು ಲೇಖನದಲ್ಲಿ ಒಬ್ಬ ಸಾಮಾನ್ಯ ವ್ಯಕ್ತಿ ಪ್ರಾಪಂಚಿಕ ಜೀವನದಿಂದ ಮುಕ್ತನಾಗಿ ದೈವಿ ನೆಲೆಯನ್ನು ಹುಡುಕಲು ಪ್ರಾರಂಭಿಸಿದರ ಸೂಚನೆ ಇದೆ. ವಚನಗಳ ಪ್ರಭಾವದ ನೆಲೆಯಲ್ಲಿ ಪುರಂದರರ ಕೀರ್ತನೆಗಳು ರಚನೆಯಾದರು, ಅದು ದಾಸರ ಅಂತರಂಗದ ತುಡಿತ,ದೈವ ಹಾಗೂ ಮಾನವನ ಸಂಬಂಧ ಸಮಾಜದ ಶುದ್ಧಿಕರಣ ಸಾಮಾಜಿಕ ಸಮಸ್ಯೆಗಳ ಅನಾವರಣವೇ ಕೀರ್ತನೆಗಳ ರಚನೆಗೆ ಸ್ಫೂರ್ತಿ ಎಂಬ ನಿಲುವನ್ನು ರಾಗೌ ಹೊಂದಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲೇ ಮೊದಲ ಬಾರಿಗೆ ಒಂದು ಧಾನ್ಯವನ್ನು ಕಾವ್ಯದ ವಸ್ತುವಾಗಿಸಿ ರಚನೆಯಾದ ಕೃತಿ ಕನಕದಾಸರ ರಾಮಧಾನ್ಯ ಚರಿತ್ರೆ. ಈ ಕಾವ್ಯವನ್ನು ಕುರಿತಂತೆ ರಾಗೌ ಅವರು ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಆರ್ಥಿಕ ಆಯಾಮಗಳಿಂದ ಚರ್ಚಿಸಿದ್ದಾರೆ ಕೃತಿ ರಚನೆಯ ಪ್ರೇರಣೆ ಪ್ರಭಾವಗಳನ್ನು ಗುರುತಿಸಿ ಸಮಾಜದ ಉಚ್ಚ–ನಿಚ್ಚ ಎಂಬ ಎರಡು ವರ್ಗಗಳ ಪ್ರತಿನಿಧಿಗಳಾಗಿ ರಾಗಿ–ಭತ್ತವನ್ನು ಗ್ರಹಿಸಿರುವುದು, ಕಥಾವಸ್ತು, ಕಾವ್ಯದ ಬೆಳವಣಿಗೆ ಮುಂತಾದ ಅಂಶಗಳನ್ನು ಲೇಖನ ಪ್ರಶಂಸಿಸುತ್ತದೆ.

ಜನಪದ ಭಕ್ತಿಗೀತೆಗಳು ಒಂದು ಉತ್ತಮ ವಿಮರ್ಶಾ ಪ್ರಬಂಧವಾಗಿದೆ. ಜನಪದ ಸಾಹಿತ್ಯ ಉಗಮ, ವಿಕಾಸ, ಕಾರಣ, ಧೋರಣೆ ಮತ್ತು ಮಹತ್ವವನ್ನು ಲೇಖನ ಸಾರಿ ಹೇಳುತ್ತದೆ. ನಂತರ ಜನಪದ ಭಕ್ತಿಗೀತೆಗಳ ಸ್ವರೂಪ, ಅದರ ವಿಕಾಸವನ್ನು ಕುರಿತು ಸ್ಥೂಲವಾಗಿ ಚರ್ಚಿಸಿದೆ. ಶಿಷ್ಟ ಸಾಹಿತ್ಯಕ್ಕಿಂತಲೂ ಮಿಗಿಲಾದುದು. ಜನಪದ ಸಾಹಿತ್ಯ ಎಂಬುದನ್ನು ಲೇಖನ ಸ್ಪಷ್ಟಪಡಿಸುತ್ತದೆ. ಭಕ್ತಿಗೀತೆಗಳನ್ನು ಪ್ರಾರ್ಥನಾಗೀತೆ,ಪ್ರಾದೇಶಿಕ/

ಕುಲದೇವತೆಗಳ ಗೀತೆ, ಗುರುಭಕ್ತಿಯ ಗೀತೆ, ಹೃದಯಗೀತೆ ಎಂದು ವಿಂಗಡಿಸಿರುವುದು ಅಧ್ಯಯನದ ಶಿಸ್ತು ಮತ್ತು ವಿಮರ್ಶಕ ಆಸಕ್ತಿಗೆ ಹಿಡಿದ ಕನ್ನಡಿಯಾಗಿದೆ.

'ಅವಗಾಹನ' ರಾಗೌ ಅವರ ಮತ್ತೊಂದು ವಿಮರ್ಶಾಕೃತಿಯಾಗಿದೆ. ಈ ಕೃತಿಯಲ್ಲಿನ 'ಕಟ್ಟೀಮನಿಯವರ ಎರಡು ಕಾದಂಬರಿಗಳು,' 'ವೆಂಕಣ್ಣಯ್ಯನವರ ವಿಮರ್ಶೆ,' 'ಕುವೆಂಪು ಅವರ ವಿಭೂತಿ ಪೂಜೆ,' 'ಕುವೆಂಪು ಅವರ ಶ್ಮಶಾನಕುರುಕ್ಷೇತ್ರಂ' ಈ ಕೆಲವು ವಿಮರ್ಶೆಗಳು ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಗಮನಾರ್ಹವಾದ ವಿಚಾರಧಾರೆಯನ್ನು ಒಳಗೊಂಡಿದೆ.ಕನ್ನಡದ ಅಪರೂಪದ ಸಾಹಿತಿಯಾದ ಟಿ.ಎಸ್.ವೆಂಕಣ್ಣಯ್ಯರವರನ್ನು ಕುರಿತು ರಾಗೌ ಅವರ ದೃಷ್ಟಿವ್ಯಾಪಕವಾದುದು. ವೆಂಕಣ್ಣಯ್ಯರವರ ಬರವಣಿಗೆಯ ಸೂಕ್ಷ್ಮತೆ,ವಿಶ್ಲೇಷಣಾದಾಟಿ, ಶಿಸ್ತು,ಸಮಗ್ರತೆ, ನಿರಪೇಕ್ಷ ದೃಷ್ಟಿಯನ್ನು ರಾಗೌ ಈ ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. 'ಮಂಡ್ಯ ಜಿಲ್ಲೆಯ ಕಾದಂಬರಿ' ಎಂಬ ಲೇಖನದಲ್ಲಿ ನವೋದಯ ಕಾಲ ಘಟ್ಟದಲ್ಲಿ ಜಿಲ್ಲೆಯಲ್ಲಿ ಹೆಸರು ಮಾಡಿದ ಪ್ರಮುಖ ಕಾದಂಬರಿಕಾರರು ಹಾಗೂ ಪ್ರಭಾವಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಅದರಲ್ಲೂ ಸ್ತ್ರೀವಾದಿ ನೆಲೆಯಲ್ಲಿ ರಚನೆಗೊಂಡ ತ್ರಿವೇಣಿ, ಆರ್ಯಾಂಬ ಮತ್ತು ವಾಣಿ ಅವರ ಕಾದಂಬರಿಗಳ ಪ್ರಾಮುಖ್ಯತೆಯನ್ನು ಲೇಖನ ಎತ್ತಿ ಹಿಡಿಯುತ್ತದೆ.

'ಕಟ್ಟೀಮನಿಯವರ ಎರಡು ಕಾದಂಬರಿಗಳು' ಎಂಬ ಶೀರ್ಷಿಕೆಯ ಲೇಖನವು ಕಟ್ಟೀಮನಿಯುವರ ಕಾದಂಬರಿಯ ಸಾಮಾಜಿಕ ಬದ್ಧತೆ, ಪ್ರಾಪಂಚಿಕ ದೃಷ್ಟಿ ಶೋಷಣೆ,ದಬ್ಬಾಳಿಕೆ ಮೊದಲಾದವುಗಳನ್ನು ಸಹೃದಯರಿಗೆ ಅರ್ಥವಾಗುವಂತೆ ನವುರಾಗಿ ನಿರೂಪಿಸಿದ್ದಾರೆ. ಪಾತರಗಿತ್ತಿ ಮತ್ತು ಗ್ರಾಮ ಸೇವಕಾ ಎಂಬ ಎರಡು ಕಾದಂಬರಿಗಳ ವಿಮರ್ಶೆ ಇದೆ.

ರಾಗೌ ಅವರು ಕುವೆಂಪು ಸಾಹಿತ್ಯದ ಪ್ರಭಾವ-ಪ್ರೇರಣೆ, ವಸ್ತು, ದೃಷ್ಟಿ, ಆಶಯವನ್ನು ಚೆನ್ನಾಗಿ ಬಲ್ಲ ಒಬ್ಬ ಶ್ರೇಷ್ಠ ವಿಮರ್ಶಕ. ಕುವೆಂಪುರವರನ್ನು ಬಹು ನಿಕಟವಾಗಿ ರಾಗೌ ಬಲ್ಲರು ಹೀಗಾಗಿ 'ಕುವೆಂಪು ಸಾಹಿತ್ಯ ವಿಮರ್ಶನ' ಕೃತಿಯು ಕುವೆಂಪು ಸಾಹಿತ್ಯವನ್ನು ವಿಮರ್ಶಿಸಲೆಂದೆ ಮುಡುಪಾಗಿದೆ 'ಭಾವಗೀತೆಗಳು ಕೆಲವು ಟಿಪ್ಪಣಿಗಳು' ಲೇಖನ 'ಕುವೆಂಪು ಅವರ ಸುಮಾರು ೨೦ ಕವನ ಸಂಕಲನಗಳಲ್ಲಿನ ಭಾವಗೀತೆಗಳ ಭಾಷೆ,ಪ್ರೇರಣೆ, ಪ್ರಭಾವ ಮತ್ತು ದೃಷ್ಟಿಯನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಭಾವಗೀತೆಯಲ್ಲಿನ ಪುರಾಣ ಆಧ್ಯಾತ್ಮ, ಸಮಾಜ, ನಾಡು-ನುಡಿ, ಪ್ರಕೃತಿ ಮೊದಲಾದವುಗಳ ಬಗ್ಗೆ ವಿಶ್ಲೇಷಿಸಲಾಗಿದೆ.

'ಗೊಬ್ಬರ-ಒಂದು ವಿವೇಚನೆ' ಕುವೆಂಪು ಬರೆದ 'ಗೊಬ್ಬರ' ಎಂಬ ಕವನವನ್ನು ಅನ್ವಯಿಕವಾಗಿ ವಿಮರ್ಶಿಸಿದ್ದಾರೆ. ಗೊಬ್ಬರ ಕವಿತೆಯ ವಸ್ತು, ಶೈಲಿ, ನಿರೂಪಣೆ ಹಾಗೂ ತಂತ್ರಗಳನ್ನು ಕುರಿತು ಪ್ರಶಂಸಿಸಿದ್ದಾರೆ. ಕವನದ ಆಶಯುವನ್ನು ಸಾಮಾಜಿಕ ತಳಹದಿಯ ಮೇಲೆ ಚಿತ್ರಿಸಿದ್ದಾರೆ. ಕುವೆಂಪು ಅವರ 'ಬೆರಳ್‌ಗೆ ಕೊರಳ್' ಮಹಾಭಾರತದೊಳಗೆ ಸೂಕ್ಷ್ಮವಾಗಿದ್ದ ವರ್ಗ ಮತ್ತು ಜಾತಿ ಮಾತ್ಸರ್ಯವನ್ನು ಪುರಾಣ ಪ್ರತಿಮೆಯಾಗಿ ಬಳಸಿ ಕೊಂಡು ಅದೇ ರೀತಿಯ ಸಮಕಾಲೀನ ಸಮಸ್ಯೆಗಳಿಗೆ ಅಭಿವ್ಯಕ್ತಿ ಕೊಡುತ್ತದೆ. ಈ ನಾಟಕವನ್ನು ರಾಗೌ ಮುಖ್ಯವಾಗಿ ಸಾಂಕೇತಿಕ ನೆಲೆಯಲ್ಲಿ ಗ್ರಹಿಸುವ ಪ್ರಯತ್ನವನ್ನು, 'ಬೆರಳ್‌ಗೆ ಕೊರಳ್ ಮತ್ತು ಸಾಂಕೇತಿಕತೆ' ಎಂಬ ಲೇಖನದಲ್ಲಿ ಮಾಡಿದ್ದಾರೆ. ನಾಟಕದ ವಸ್ತು, ಶೈಲಿ, ಭಾಷೆ, ರೂಪಗಳನ್ನು ರಾಗೌ ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ನಾಟಕ ತಾಂತ್ರಿಕವಾಗಿ ಬೆಳೆಯುವ ಕ್ರಮ, ನಾಟಕದ ವಸ್ತುವೇ ತನಗೆ ಬೇಕಾದ ರೀತಿಯಲ್ಲಿ ನಡುಗನ್ನಡ ಭಾಷೆಯನ್ನು ಧರಿಸಿ ಕೊಂಡಿರುವುದರ ಔಚಿತ್ಯ ಮೊದಲಾದ ಕೋನಗಳಿಂದ ನಾಟಕವನ್ನು ವಿಮರ್ಶಿಸಿ ಅದರ ಮಹತ್ವವನ್ನು ಸಾರ್ವಕಾಲೀಕ ನೆಲೆಯಲ್ಲಿ ಎತ್ತಿ ಹಿಡಿಯಲಾಗಿದೆ.

'ಪ್ರಾಸ್ತಾವಿಕ' ರಾಗೌ ಅವರ ಮತ್ತೊಂದು ವಿಮರ್ಶಾಕೃತಿ. ಇದರ ೧೧ ಲೇಖನಗಳ ಪೈಕಿ 'ಕನ್ನಡ ಭಾಷೆಯ ಪರಂಪರೆ' 'ರಾಘವಾಂಕ ಜೀವನ ಮತ್ತು ಕೃತಿಗಳು', 'ಕಿಟ್ಟೆಲ್ಲ ಕನ್ನಡ ಸೇವೆ' ಮತ್ತು 'ತಿರುವಳ್ಳುವರ್ ತಿರುಕ್ಕುದಳ್' ವಿಮರ್ಶಾ ಲೇಖನಗಳಲ್ಲದಿದ್ದರೂ ವಸ್ತು ವಿಶ್ಲೇಷಣಾ ದೃಷ್ಟಿಯಿಂದ ತಮ್ಮದೇ ಆದ ಮಹತ್ವ ಪಡೆದುಕೊಳ್ಳುತ್ತವೆ. ಇದರಲ್ಲಿನ 'ರತ್ನಾಕರನ ಶತಕಗಳು' , 'ರತ್ನಾಕರನ ಹಾಡುಗಳು', 'ಕಾರಂತರಗೀತನಾಟಕಗಳು' ಮತ್ತು 'ಹಂಸದಮಯಂತಿ ಮತ್ತು ಇತರ ರೂಪಕಗಳು' ಪರಿಣಾಮಕಾರಿ ವಿಮರ್ಶಾ ಲೇಖನಗಳ 'ಮುಕ್ತಕ ಸಾಹಿತ್ಯ', 'ಕಳೆದ ಇಪ್ಪತ್ತೈದು ವರ್ಷಗಳ ಕನ್ನಡ ಕಾದಂಬರಿ' ಮತ್ತು 'ರಂ.ರಾ. ದಿವಾಕರರ ಅಂತರಾತ್ಮನಿಗೆ' ಆಯಾಯ ವಿಷಯಗಳಿಗೆ ಸಂಬಂಧಿಸಿದಂತೆ ಪರಿಚಯ ರೂಪದ ವಿಮರ್ಶೆಗಳಾಗಿವೆ.

ಪ್ರಾಸ್ತಾವಿಕದಲ್ಲಿ ರತ್ನಾಕರನ ಶತಕ, ರತ್ನಾಕರನ ಹಾಡುಗಳು ಎಂಬ ಎರಡು ಲೇಖನಗಳಿವೆ. ಇದರಲ್ಲಿ ಶತಕಗಳ ಮಹತ್ವ, ರಚನೆ, ಸ್ವರೂಪವನ್ನು ಕುರಿತು ವಿವೇಚಿಸಿದ್ದಾರೆ. 'ಭರತೇಶ ವೈಭವ' ಮತ್ತು ಶತಕಗಳ ದೃಷ್ಟಿಯಲ್ಲಿನ ವ್ಯತ್ಯಾಸವನ್ನು ಸೂಚಿಸಿದ್ದಾರೆ. ಶತಕಗಳ ಇತಿಮಿತಿಯನ್ನು ಒರೆಗಲ್ಲಿಗೆ ಹಚ್ಚಿದ್ದಾರೆ.

'ಕಾರಂತರ ಗೀತನಾಟಕಗಳು' ಎಂಬ ಲೇಖನದಲ್ಲಿ ಗೀತನಾಟಕಗಳ ಪ್ರಭಾವ-ಪ್ರೇರಣೆ, ಸಿದ್ಧಿ-ಸಾಧನೆ, ಇತಿ-ಮಿತಿ ಆಧುನಿಕ ಸಂದರ್ಭದಲ್ಲಿ ನಾಟಕದ ವಿಕಾಸವನ್ನು ಕುರಿತು ಈ ಲೇಖನ ಪ್ರಸ್ತಾಪಿಸುತ್ತದೆ. ಹಂಸದಮಯಂತಿ ಮತ್ತು ಇತರ ರೂಪಕಗಳು ಪುತಿನರ ಕೆಲವು ಗೀತನಾಟಕಗಳ ವಿಮರ್ಶಾ ಪ್ರಬಂಧ. ಪುತಿನರ ಗೀತರೂಪಕಗಳು ಪಾಶ್ಚಾತ್ಯ ಒಪೆರಾ, ಸಂಸ್ಕೃತ ನಾಟಕ ಮತ್ತು ಯಕ್ಷಗಾನ ಬಯಲಾಟಗಳಿಂದ ಪ್ರೇರಿತಗೊಂಡು ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ತುಣುಕುಗಳನ್ನು ವಸ್ತುವಾಗಿ ಹೊಂದಿ ನಾಟಕ ರೂಪ ಪಡೆದುಕೊಂಡಿರುವುದನ್ನು ಈ ಲೇಖನದಲ್ಲಿ ಚರ್ಚಿಸುತ್ತಾರೆ.

'ಮುಕ್ತಕ ಸಾಹಿತ್ಯ' ಎಂಬ ಲೇಖನದಲ್ಲಿ ಮುಕ್ತಕದ ಮಹತ್ವ ಹಾಗೂ ಸ್ವರೂಪವನ್ನು ಚರ್ಚಿಸಿದ್ದಾರೆ. ನಂತರ ಮುಕ್ತಕ ಸಾಹಿತ್ಯದ ಹುಟ್ಟು ಮತ್ತು ಬೆಳೆವಣಿಗೆಯನ್ನು ಪ್ರಾಚೀನ ಕನ್ನಡ ಕಾವ್ಯಗಳಿಂದ ಹಿಡಿದು ಆಧುನಿಕ ಕನ್ನಡ ಸಾಹಿತ್ಯದವರೆವಿಗೂ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ದಿನಕರ ದೇಸಾಯಿ, ಡಿ.ವಿ.ಜಿ. ಎಸ್.ವಿ.ಪರಮೇಶ್ವರಭಟ್ಟ, ತಿ.ನಂ.ಶ್ರೀ ಮೊದಲಾದವರ ಮುಕ್ತಕಗಳ ರಚನೆ ಆಧುನಿಕ ಸಂದರ್ಭದಲ್ಲಿ ಜೀವಂತಗೊಳಿಸಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

'ಸಮಾಕೀರ್ಣ' ರಾಗೌ ಅವರ ವಿಮರ್ಶಾ ಕೃತಿಯಾಗಿದೆ. ಈ ಕೃತಿಯಲ್ಲಿ 'ಕರ್ನಾಟಕದ ಕಲೆಗಳು', ಸಂಶೋಧನಾ ರೂಪದ 'ಕನಕದಾಸರ ಬದುಕು : ಒಂದು ವಿವೇಚನೆ' . 'ಮಂಕುತಿಮ್ಮನ ಕಗ್ಗ ಒಂದು ಚಿಂತನೆ'. ' ಪೈ ಅವರನ್ನು ಕುರಿತು ಸಾಹಿತ್ಯ' ಮತ್ತು 'ಬಾಳದೇಗುಲದಲ್ಲಿ'. ಒಂದು ಹೊಸ ಬಗೆಯ ಕಾವ್ಯ' ಲೇಖನಗಳು ರಾಗೌ ಅವರ ಪ್ರಬುದ್ಧ ವಿಮರ್ಶಾಲೇಖನಗಳಾಗಿದೆ.

'ಮಂಕು ತಿಮ್ಮನ ಕಗ್ಗ– ಒಂದು ಮರುಚಿಂತನೆ' ಎಂಬ ಲೇಖನವು ಮುಕ್ತಕಗಳನ್ನು ಕುರಿತ ಹೊಸ ಚಿಂತನೆ ಹಾಗೂ ಆಶಯವನ್ನು ವ್ಯಕ್ತ ಪಡಿಸುತ್ತದೆ. ಡಿ.ವಿ.ಜಿ ಈ ಕೃತಿಯನ್ನು ಬರೆಯಲು ದೊರೆತ ಪ್ರೇರಣೆ– ಪ್ರಭಾವ, ಸಾಹಿತಿಕ ಸಂದರ್ಭವನ್ನು ಈ ಲೇಖನ ವಿಶ್ಲೇಷಿಸುತ್ತದೆ. ಈ ರೀತಿಯ ಒಳ–ಹೊರಗನ್ನು ಹೊಂದಿರುವ ಕೃತಿಯನ್ನು ರಾಗೌ ಅವರು ಆಧುನಿಕ ಸಂದರ್ಭದಲ್ಲಿ ನಿಂತು ವಿವೇಚಿಸುವ ಪ್ರಯತ್ನ ಮಾಡಿದ್ದಾರೆ.

ಡಿವಿಜಿ ಅವರ ಪ್ರಸಿದ್ಧ ಕೃತಿಯ ತಾತ್ವಿಕ ವಿಶ್ಲೇಷಣೆ ಇಲ್ಲಿದೆ ಅನುಭವಕ್ಕಿಂತ ಹೆಚ್ಚಾಗಿ ಅರಿವನ್ನು ಆಧರಿಸಿದ ಸೌಂದರ್ಯಾಭಿವ್ಯಕ್ತಿಗಿಂತ ಹೆಚ್ಚಾಗಿ ತತ್ವ ಜಿಜ್ಞಾಸೆಯನ್ನು ಉದ್ದೇಶಿಸಿದ ಮಂಕುತಿಮ್ಮನ ಕಗ್ಗ ' ನಮ್ಮ ಜ್ಞಾನದ ಗಡಿಗಳನ್ನು ವಿಸ್ತರಿಸುತ್ತದೆಯಾದರೆ, ನಮ್ಮ ಅನುಭವನ್ನು ಸೂಕ್ಷ್ಮಗೊಳಿಸುವುದು ಕಡಿಮೆ. ವೇದ, ಉಪನಿಷತ್ತು ಮತ್ತು ಭಗವದ್ಗೀತೆ

ಬಲ್ಲ ಭಾರತೀಯನಿಗೆ ಮಂಕುತಿಮ್ಮನ ಕಗ್ಗದಲ್ಲಿ ಹೊಸದೇನನ್ನೂ ಕಾಣದೆ ಹೋಗಬಹುದು. ಆಗ ಡಿವಿಜಿಯವರ ದರ್ಶನವೇನು ಎಂಬ ಸಮಸ್ಯೆ ಸಹಜವಾಗಿಯೇ ಏಳಬಹುದು ಎನ್ನುತ್ತಾರೆ. ಡಿವಿಜಿಯವರ ಮುಕ್ತಕಗಳಲ್ಲಿ ಸಾಮಾಜಿಕ ಪ್ರಸ್ತುತತೆಯ ಒಲವು ವಿರಳವಾಗಿರುವುದನ್ನೂ, ವ್ಯಕ್ತಪಡಿಸುವ ವಿಚಾರಗಳ ವಿರುದ್ಧ ನೆಲೆಗಳನ್ನೂ ತಮ್ಮ ವಿವೇಚನೆಯಲ್ಲಿ ತೋರಿಸಿ ಕೊಟ್ಟಿದ್ದಾರೆ. ಸರ್ವಜ್ಞನ ರಚನೆಗಳಲ್ಲಿನ ಸಾರ್ವತ್ರಿಕತೆಯಾಗಲಿ ಜನಪ್ರಿಯತೆಯಾಗಲಿ ಡಿವಿಜಿಯವರ ರಚನೆಗಳಲ್ಲಿ ದೊರೆಯುವುದು ಕಷ್ಟವಾಗುತ್ತದೆ.

ಬಾಳ ದೇಗುಲದಲ್ಲಿ ಒಂದು: ಒಂದು ಹೊಸ ಬಗೆಯ ಕಾವ್ಯ ಆಧುನಿಕ ಕನ್ನಡ ಸಾಹಿತ್ಯವನ್ನು ಕುರಿತು ರಾಗೌ ಬರೆದ ವಿಮರ್ಶೆಗಳಲ್ಲಿ ಪ್ರಮುಖವಾದುದು. ಮೊದಲಲ್ಲಿ ಪ್ರಬಂಧ ಗೋಕಾಕರ ರಚನೆಗಳ ಪ್ರೇರಣೆಗಳನ್ನು ವಿವೇಚಿಸುತ್ತಾ ರೂಪದಲ್ಲಿ ಅವರು ಹೊಸವನ್ನು ಪ್ರಯೋಗಿಸುತ್ತಾ ಸಾಗಿದರೂ ವಸ್ತು ಮತ್ತು ದೃಷ್ಟಿಯಲ್ಲಿ ನವೋದಯದ ಪಂಕ್ತಿಗೆ ಸೇರಿದವರೆಂಬುದನ್ನು ತೋರಿಸಿದ್ದಾರೆ. ನವೋದಯದ ಸ್ಫೂರ್ತಿ ತತ್ವವೇ ಗೋಕಾಕರ ಮೂಲ ಪ್ರಜ್ಞೆಯಾಗಿದೆ ಎಂದಿದ್ದಾರೆ. ಒಂದು ಏಕ ಸೂತ್ರತೆಗೆ ಒಳಪಟ್ಟಿದರೂ ತಮ್ಮ ಸ್ವತಂತ್ರ ಅಸ್ತಿತ್ವವನ್ನು ಬಿಟ್ಟುಕೊಡದ 'ಬಾಳದೇಗುಲದಲ್ಲಿನ ಕವನಗಳನ್ನು ಮೊದಲ ಪೀಠಿಕಾ ಪದ್ಯಗಳು ಮತ್ತು ಕೊನೆಯ ಮಂಗಳಾಷ್ಟಕದ ಮೂಲಕ ಒಂದು ಚೌಕಟ್ಟಿಗೆ ತರಲು ಪ್ರಯತ್ನಿಸಿ ಆಧುನಿಕ ಕಾಲದ ಮಹಾಕಾವ್ಯದ ಮಾದರಿ ಎಂದು ಗೋಕಾಕರು ಕರೆದು ಕೊಂಡುದರಿಂದ ಉಂಟಾದ ಸಮಸ್ಯೆಯನ್ನು ಬಿಡಿಸುವ ಕಡೆಗೆ ಲೇಖನ ಮುಖ್ಯವಾಗಿ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದಂತೆ ಕಾಣುತ್ತದೆ. ತನ್ನ ವಿಶ್ಲೇಷಣೆಯ ನಂತರ 'ಮಹಾಕಾವ್ಯದ ಮಾದರಿ' ಯಾಗಿ ಸ್ವೀಕರಿಸುವುದು ಸಾಧ್ಯವಿಲ್ಲ ಎಂಬ ನಿಲುವಿಗೆ ಬರುತ್ತದೆ. ಪ್ರಬಂಧ 'ಕವನ ಮಾಲೆ' "ಕವನ ಮಂದಿರ" ಎನ್ನುವ ಮಾತುಗಳೂ ಸಡಿಲವಾದುವೇ ಎನ್ನಲಾಗಿದೆ. ಸ್ವಲ್ಪ ಮಟ್ಟಿನ ಅಂತಹ ಬೆಸುಗೆಯೇನೂ ಇದೆ. ಆದರೆ ಈ ಏಕಸೂತ್ರತೆ ಕಥಾವಸ್ತುವೊಂದರ ಅವಿಚ್ಛಿನ್ನತೆಯಿಂದ ನಿರ್ಮಿತವಾದುದೇನೂ ಅಲ್ಲ. ಇಲ್ಲಿಯ ಒಂದೊಂದು ಕವನಕ್ಕೂ

ಪ್ರತ್ಯೇಕ ಅಸ್ತಿತ್ವವಿದೆ. ಹೀಗೆ ಪ್ರತಿಯೊಂದು ಕವನವೂ ಸ್ವತಂತ್ರ ಘಟಕವಾಗಿ ಕೆಲಸ ಮಾಡಿಯೂ, ಮಾನವ ಮಾದರಿಗಳನ್ನು ಕೊಡುವುದು ಕೃತಿಯ ವೈಶಿಷ್ಟವೆಂದು ತೋರುವುದು ಎಂಬುದು ಇಲ್ಲಿಯ ಅಂತಿಮ ನಿಲುವು ಈ ವೈಶಿಷ್ಟ್ಯವನ್ನು ಆಧರಿಸಿಯೇ ಇದೊಂದೆ ಹೊಸ ಬಗೆಯ ಕಾವ್ಯ ಎಂದು ಕರೆದಿದೆ ಎಂಬ ಅಂಶವನ್ನು ಪ್ರಬಂಧದಲ್ಲಿ ಸ್ಪಷ್ಟಪಡಿಸಲಾಗಿದೆ.

'ಬಾಳ ದೇಗುಲದಲ್ಲಿ' ಒಂದು ಹೊಸ ಬಗೆಯಕಾವ್ಯ' ಒಂದು ಉತ್ತಮ ವಿಮರ್ಶಾ ಲೇಖನವಾಗಿದೆ. ಗೋಕಾಕ್ ಕಾವ್ಯ ಕೃಷಿ ಆರಂಭಿಸಿದ್ದು ನವೋದಯ ಕಾವ್ಯ ಪರಿಕರಗಳ ನಡುವಿನಿಂದ. ಆದರೆ ಅವರು ಬೆಳೆಯುತ್ತಾ ಹೊಸ ಮಾರ್ಗವೊಂದರ ಆವಾಹನೆಗೆ ಕಾರಣವಾದುದು ಈಗ ಚರಿತ್ರೆಯ ವಿಷಯ . ಅವರ ಈ ಬೆಳವಣಿಗೆಯ ಬದಲಾವಣೆಯ ಹೊರಳು ಘಟ್ಟದಲ್ಲಿ 'ಬಾಳ ದೇಗುಲದಲ್ಲಿ' ಕಾವ್ಯ ಪ್ರಕಟಗೊಂಡಿದೆ. ಕಾವ್ಯದ ಸ್ವರೂಪ, ಮಹತ್ವ ಮತ್ತು ಪ್ರಭಾವವನ್ನು ಈ ಲೇಖನದಲ್ಲಿ ಸವಿವರವಾಗಿ ಚರ್ಚಿಸಲಾಗಿದೆ.

'ಪ್ರಾಚೀನ ಕಾವ್ಯ ಚಿಂತನ' ಐನೂರು ಪುಟಗಳ ಗ್ರಂಥ ಪ್ರಾಚೀನ ಕನ್ನಡ ಸಾಹಿತ್ಯವನ್ನು ಕುರಿತು ರಾಗೌ ಬರೆದ ಎಲ್ಲ ಲೇಖನಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಪಂಪನಿಂದ ಹಿಡಿದು ಅಳಿಯ ಲಿಂಗರಾಜನವರೆಗಿನ ವಿಷಯ ವ್ಯಾಪ್ತಿ ಇಲ್ಲಿದ್ದು ಇಪ್ಪತ್ತೈದು ಲೇಖನಗಳಿವೆ. ಮುಖ್ಯವಾಗಿ ರಾಗೌ ವಿಮರ್ಶೆ ಸಂಯಮ ಪೂರ್ಣವಾದ ನಿರ್ದುಷ್ಟವಾದ ಬರೆವಣಿಗೆಯಿಂದ ಕೂಡಿದೆ.

ರಾಘವಾಂಕ ಪ್ರಚಾರ ಪುಸ್ತಕ ಮೊಲೆಯ ಪ್ರಕಟಣೆ ಕವಿ ರಾಘವಾಂಕನನ್ನೂ ಅವನ ಕೃತಿಗಳನ್ನು ಕುರಿತ ಪರಿಚಯಾತ್ಮಕ ಪ್ರಯತ್ನ ಇದು. ಇದರಲ್ಲಿ ೮ ಭಾಗಗಳಿವೆ. ಚಿಕ್ಕನಂಜೇಶನ "ರಾಘವಾಂಕ ಚರಿತೆ"ಯು ಸೇರಿದಂತೆ ರಾಘವಾಂಕನ ಉಲ್ಲೇಖವಿರುವ ಗ್ರಂಥಗಳನ್ನು ಆಧರಿಸಿ ಕವಿಯ ಜೀವನ ಚಿತ್ರವನ್ನು ಕಟ್ಟಿಕೊಡಲಾಗಿದೆ. ರಾಘವಾಂಕನ ಸುತ್ತಲೂ ಹರಡಿಕೊಂಡಿರುವ ಐತಿಹ್ಯಗಳ ನಡುವೆ ಹುದುಗಿರಬಹುದಾದ ಇತಿಹಾಸವನ್ನು

ಪರಿಶೋಧಿಸುವ ಕೆಲಸ ಇಲ್ಲಿ ತಕ್ಕ ಮಟ್ಟಿಗೆ ನಡೆದಿದೆ. ಮುಂದಿನ ನಾಲ್ಕು ಭಾಗಗಳಲ್ಲಿ ಕ್ರಮವಾಗಿ ಹರಿಶ್ಚಂದ್ರ ಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥ ಚಾರಿತ್ರ ಮತ್ತು ವೀರೇಶ ಚರಿತೆಗಳನ್ನು ಪರಿಚಯಿಸಿ ಕೊಡಲಾಗಿದೆ. ರಾಘವಾಂಕನ ಕೃತಿ ರಚನೆಯ ಅನುಕ್ರಮವನ್ನು ರಾಗೌ ಅವರು ಒಪ್ಪಿಕೊಳ್ಳುವುದೂ ಹೀಗೆಯೆ. ಆಯಾ ಕೃತಿಗಳ ಸಾರವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅಲ್ಲಲ್ಲಿ ವಿಮರ್ಶೆಯ ಹೊಳವುಗಳಿವೆ. ಅನಂತರದ ಎರಡು ಭಾಗಗಳಲ್ಲಿ ರಾಘವಾಂಕನ ಕಾವ್ಯಗಳ ನಾಟಕೀಯ ಗುಣ ಮತ್ತು ಶೈಲಿಯ ಚರ್ಚೆ ಇದೆ. ಕೊನೆಯದು ಕೆಲವು ವಿಶೇಷ ವಿಚಾರಗಳನ್ನು ಪ್ರಸ್ತಾಪಿಸಿದೆ.

ಸಾರಗ್ರಹಣವೇ ಈ ಕೃತಿಯ ಉದ್ದೇಶವಾದರೂ ಅಲ್ಲಲ್ಲಿ ಹಾಯಿಸಿದ ವಿಮರ್ಶಾ ದೃಷ್ಟಿ ಕೆಲವು ಹೊಸ ವಿಚಾರಗಳನ್ನು ಹೊರಗೆಡೆಹಿಸಿದೆ, ವಿವಾದಗಳನ್ನು ಪರಿಹರಿಸಿದೆ. "ವಿಶ್ವಾಮಿತ್ರನು ಹರಿಶ್ಚಂದ್ರನ ಸತ್ಯದ ಗೆಲುವಿಗೆ ಒರೆಗಲ್ಲಾಗಿ ಪೂರ್ಣ ಒತ್ತಾಸೆ ಉದ್ದೇಶ ಹರಿಶ್ಚಂದ್ರನ ಸತ್ಯಭ್ರಷ್ಟತೆಯಲ್ಲಿ, ಸತ್ಯ ಪ್ರಖರತೆ ಆತ ಕಾಡುವ ಕೈ ಮಾತ್ರವಲ್ಲ ಕಾಪಾಡುವ ಕೈಯೂ ಕೂಡ ಎಂದಿರುವುದರಲ್ಲಿ ಆ ಪಾತ್ರದ ಚಿತ್ರಣದಲ್ಲಿ ರಾಘವಾಂಕನಿಗಿದ್ದ ಧೋರಣೆಯ ಬಗೆಗೆ ಇದ್ದ ವಿವಾದವನ್ನು ಒಂದು ನಿಲುಗಡೆಗೆ ಬಂದುದು ಆತ ಲೌಕಿಕ ಬಂಧನಗಳನ್ನೆಲ್ಲಾ ಕಳೆದುಕೊಂಡು ಮೋಹದೂರನಾದುದರ ಸಂಕೇತವೆಂದು ಹೇಳಿ ಶಿವದರ್ಶನ ಆತನ ಸತ್ಯದರ್ಶನವೂ ಆಗುತ್ತದೆಂದು ವಿಶ್ಲೇಷಿಸಿದ್ದರಲ್ಲಿ ವಿಮರ್ಶೆಯ ಸೂಕ್ಷ್ಮಾವಲೋಕನವಿದೆ. ಹರಿಶ್ಚಂದ್ರನ ಮೂಲಕ ಹರಸತ್ಯದ ಅಭಿನ್ನತೆಯನ್ನೂ ಸಿದ್ಧರಾಮನ ಮೂಲಕ ಕಾಯಕ ನಿಷ್ಠೆ ಮತ್ತು ಭೂತಾನುಕಂಪೆಗಳನ್ನೂ ರಾಘವಾಂಕ ಸಾಧಿಸಿ ತೋರಿಸಿ ಕೊಟ್ಟಿದ್ದಾನೆಂದೂ ಇವು ಅವನ ಕಾವ್ಯಗಳಲ್ಲಿ ಪ್ರತಿಪಾದಿತವಾಗಿರುವ ಮೌಲ್ಯಗಳೆಂದೂ ಹೇಳಿದ್ದಾರೆ.

ರಾಗೌ ಅವರ 'ರಾಘವಾಂಕ' ಒಂದು ಕಿರು ಹೊತ್ತಗೆ. ರಾಘವಾಂಕನನ್ನು ಕುರಿತು ಬಾಲವೃದ್ಧರಿಗೂ ಪಂಡಿತ ಪಾಮರರಿಗೂ ಪರಿಚಯ ಮಾಡಿಕೊಡುವ ಒಂದು ಪ್ರಯತ್ನ

ಈ ಗ್ರಂಥದಲ್ಲಿ ಮಾಡಲಾಗಿದೆ. ರಾಘವಾಂಕನನ್ನು ಪರಿಚಯಿಸುವ ಕೆಲವು ನುಡಿಗಳು ಗಮನಿಸಿದ್ದರೆ "ಕನ್ನಡ ಸಾಹಿತ್ಯದ ಸುದೀರ್ಘ ಇತಿಹಾಸದಲ್ಲಿ ಸ್ವತಂತ್ರ ವ್ಯಕ್ತಿತ್ವದ ವಿಶಿಷ್ಟ ಕವಿಗಳು ಸಿಕ್ಕುವುದು ವಿರಳವೆಂದು ಹೇಳಬೇಕು. ಇಂತಹ ವಿರಳ ಪಂಕ್ತಿಯಲ್ಲಿ ಬರುತ್ತಾನೆ ರಾಘವಾಂಕ ಕವಿ. ನಮ್ಮ ಸಾಹಿತ್ಯದಲ್ಲಿ ರಾಘವಾಂಕನಿಗೆ ಸರಿಮಿಗಿಲಾಗಿ ನಿಲ್ಲುವ ಕವಿಗಳು ಹಲವರಿದ್ದಾರೆ. ಆದರೆ ರಾಘವಾಂಕನಂತಹ ವಿಚಾರ ಪ್ರಧಾನ ಕವಿಗಳು ಬಹಳ ಇಲ್ಲ ಇದಕ್ಕೆ ಕಾರಣಗಳಿಲ್ಲದಿಲ್ಲ. ಕನ್ನಡ ಸಾಹಿತ್ಯದ ವಿಕಾಸದ ಆದಿಯಲ್ಲಿ ೧೨ ನೇ ಶತಮಾನವೊಂದು ಪ್ರಮುಖ ಘಟ್ಟ ಬಸವಣ್ಣನವರ ನೇತೃತ್ವದಲ್ಲಿ ನಡೆದ ಉತ್ಕ್ರಾಂತಿ ಮರೆಯಲಾಗದ ಮಹತ್ವದ ಮೈಲಿಗಲ್ಲು.

ಇದರ ಪರಿಣಾಮವಾಗಿ ಹೊಸ ದೃಷ್ಟಿ, ಹೊಸ ವಿಚಾರ, ಹೊಸ ಭಾವ ಮೌಲ್ಯಗಳು, ಉದಯವಾಯಿತು. ಈ ಶ್ರೀಸಾಮಾನ್ಯ ಪ್ರೇಮಿಗಳ ವಚನ ಸೃಷ್ಟಿ ಕನ್ನಡಕ್ಕೆ ಅನನ್ಯ ಕಾಣಿಕೆಯೆಂಬುದಿರಲಿ ಕನ್ನಡ ಸಾಹಿತ್ಯವಾಹಿನಿಗೇನೆ ಹೊಸ ಪಾತ್ರವನ್ನು ಸೃಜಿಸಿತು ಎಂಬುದು ಲಕ್ಷಿಸಬೇಕಾದ ವಿಷಯ.

ಇಂತಹ ಫಲವತ್ತಾದ ನೆಲದ ಪರಿಣತ ಫಲಗಳೇ ಮುಂದೆ ಬಂದ ಹರಿಹರ, ರಾಘವಾಂಕ, ಕವಿಗಳು ಸಹಜವಾಗಿಯೇ ಆ ಕಾಲದ ವಿಚಾರ ಮಂಥನದ ಸಾರ ಹಾಗೂ ನೂತನ ಭಾವ ಮೌಲ್ಯಗಳ ಅಭಿವ್ಯಕ್ತಿ ರಾಘವಾಂಕನ ಕಾವ್ಯಗಳಲ್ಲಿ ತಲೆದೋರಿದವು. ಇವುಗಳಿಂದಲೇ ಅವನ ಕಾವ್ಯಗಳು ಹೊಸ ಮೆರುಗಿನಿಂದ ಮಿನುಗತೊಡಗಿದವು. ಇಷ್ಟು ಮಾತ್ರವಲ್ಲದೆ ಪರಂಪರೆಯಲ್ಲಿ ಪರಂಪರೆಯನ್ನು ಸ್ಥಾಪಿಸಿದ ಕೀರ್ತಿ ರಾಘವಾಂಕನಿಗೆ ಸಲ್ಲಬೇಕು. ಚಂಪೂ ಸಂಪ್ರದಾಯಕ್ಕೆ ತಿಲಾಂಜಲಿಯನ್ನಿತ್ತು ಹೊರಟ ಹೊಸ ಹರಿಹರ ಸಂಪ್ರದಾಯದಲ್ಲಿಯೇ ಅವನ ಸಮಕಾಲೀನನೂ ಶಿಷ್ಯನೂ ಸೋದರಳಿಯನೂ ಆದ ರಾಘವಾಂಕನಿಂದ ಮತ್ತೊಂದು ಸಂಪ್ರದಾಯ ಪ್ರಾರಂಭವಾದುದು. ಕನ್ನಡ ಸಾಹಿತ್ಯದಲ್ಲಿಯೇ

ಗಮನಾರ್ಹ ವಿಚಾರವಾಗಿದೆ. ಅಲ್ಲದೆ ಹರಿಹರನ ಸಂಪ್ರದಾಯ ಅವನಲ್ಲಿಯೇ ಮುಕ್ತಾಯವಾದರೆ ರಾಘವಾಂಕನಿಂದ ಫರಿವರ್ತಿಸಲ್ಪಟ್ಟ ಷಟ್ಪದಿ ಪರಂಪರೆ ಬಹುಕಾಲ ಬಾಳಿ ಜನಪ್ರಿಯವಾಗಿ ಲೋಕೋತ್ತರವಾಯಿತು. ಹೀಗೆ ರಾಘವಾಂಕ ದೊಡ್ಡ ಕವಿಯಾಗಿ ಗಮನಾರ್ಹ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ ಕನ್ನಡ ಸಾಹಿತ್ಯದಲ್ಲಿ.[೧]

ಮೇಲಿನ ಸಾಲುಗಳು ಸರಳವಾಗಿದ್ದು ರಾಘವಾಂಕನ ಕವಿ ಪ್ರತಿಭೆಯನ್ನು ಹೊಗಳಿದ್ದಾರೆ. ವಸ್ತು ವಿಷಯವನ್ನು ಸ್ಪಷ್ಟವಾಗಿ ಹೊರಮೂಡಿಸಿದ್ದಾರೆ.

ರಾಘವಾಂಕನ ಕೃತಿ ಹಿರಿಮೆಯನ್ನು ತಿಳಿಸಿ ಕೊಡುವ ಸಾಲುಗಳಿವು: [೨] ಇಲ್ಲಿನ ಪಾತ್ರಗಳು ಕೇವಲ ಶುಷ್ಕ ತತ್ವಕ್ಕೆ ಅಂಟಿಕೊಂಡು ಜೋತುಬಿದ್ದವುಗಳಲ್ಲ. ಆ ತತ್ವವನ್ನು ಅರಗಿಸಿಕೊಂಡು ನಿಂತವುಗಳು. ಹೀಗೆ ರಾಘವಾಂಕ ೧೨ ಶತಮಾನದಲ್ಲಿ ಪ್ರಕಟಗೊಂಡ ವಿಚಾರ ಭಾವ ಮೌಲ್ಯಗಳಿಗೆ ಕಥಾ ವೇದಿಕೆಗಳಲ್ಲಿ ಕಾವ್ಯಾಭಿವ್ಯಕ್ತಿಯನ್ನು ಕೊಟ್ಟು ವ್ಯಕ್ತಪಡಿಸಿರುವುದು ಪ್ರಶಂನೀಯವಾದುದು. ಅವನ ಕಾವ್ಯಗಳಲ್ಲಿ ವಿಚಾರ ಸಂಪತ್ತಿದೆ, ದೃಶ್ಯ ಜಗತ್ತಿದೆ, ಅಪೂರ್ವ ಕಲೆಯಿದೆ. ರಾಘವಾಂಕ ತನ್ನದೇ ಆದ ಶೈಲಿಯ, ದೃಷ್ಟಿಯ, ಪ್ರತಿಭೆಯ ವಿಶಿಷ್ಟ ಕವಿ. ಉನ್ನತ ವಿಚಾರವಂತ ಹಾಗೂ ಪ್ರತಿಭಾಪೂರ್ಣ ನಾಟಕಗಾರ. ಕನ್ನಡದಲ್ಲಿ ಅವನದು ಮಾಸದ ಹೆಸರು. ಕವಿಗಳಲ್ಲಿ ಆತ ಉದ್ದಾಮ ಕವಿ[೨]. ಹೀಗೆ ಪುಟ್ಟ ಪುಟ್ಟ ವಾಕ್ಯಗಳನ್ನು ಬಳಸುವುದರ ಮೂಲಕ ವಿಷಯ ಸ್ಪಷ್ಟವಾಗುವಂತೆ ರಾಗೌ ಮಾಡಿದ್ದಾರೆ.

'ದುರ್ಗಸಿಂಹ' ಎಂಬ ಕಿರು ಪುಸ್ತಕ ಸೊಗಸಾಗಿ ಓದಿಸಿಕೊಂಡು ಹೋಗುವ ಗುಣವನ್ನು ಪಡೆದುಕೊಂಡಿದೆ. ಪಂಚತಂತ್ರ ಕುರಿತಂತೆ ಪಂಚತಂತ್ರದ ಕಥಾ ವಸ್ತು, ಕಥೆಯ ಸ್ವರೂಪ, ಉಪಕಥೆಗಳ ಹೆಣಿಗೆ, ಶೈಲಿ ಮೊದಲಾದುವುಗಳನ್ನು ಕುರಿತು ರಾಗೌ ವಿಶ್ಲೇಷಿಸಿದ್ದಾರೆ. ಇಲ್ಲಿ ಬರುವ ಪ್ರತಿ ಕಥೆಯು ಸಾಮಾಜಿಕ ಮತ್ತು ಧಾರ್ಮಿಕ, ರಾಜಕೀಯ, ನೈತಿಕತೆಯನ್ನು ಎತ್ತಿ ಹಿಡಿಯುತ್ತದೆ ಎಂಬ ರಾಗೌ ಅಭಿವ್ಯಕ್ತಿಸಿದ್ದಾರೆ. ಹೌದು ರಾಗೌ

ಅವರ ಮಾತುಗಳು ವಸ್ತುನಿಷ್ಠವಾದುದು ಪಂಚತಂತ್ರದ ಎಲ್ಲಾ ಕಥೆಗಳನ್ನು ಅವಲೋಕಿಸಿದಾಗ ಸಾಮಾಜಿಕ ಜೀವನ, ರಾಜಕೀಯ ತಂತ್ರ –ಕುತಂತ್ರಗಳು ಅಭಿವ್ಯಕ್ತವಾಗುತ್ತದೆ.

ಪಂಚತಂತ್ರವು ನೀತಿ ಕಥೆಗಳ ಸಂಗ್ರಹವಾಗಿದ್ದು, ಪ್ರಾಯೋಗಿಕ ರಾಜಕೀಯ ಶಾಸ್ತ್ರದ ಅಂಗವಾಗಿ ಇಲ್ಲಿನ ಕಥೆಗಳೆಲ್ಲಾ ಬರುತ್ತವೆ. ಆದ್ದರಿಂದ ಇದು ನೀತಿ ಕಾವ್ಯವಾಗಿ ಪರಿಣಿತವಾಗುತ್ತದೆಯೇ ಹೊರತು, ಶುದ್ಧ ಕಾವ್ಯವಾಗಿ ನಿಲ್ಲುವುದಿಲ್ಲ ಎಂಬುದನ್ನು ಸ್ಪಷ್ಟ ಪಡಿಸಬಹುದು. ಕಥೆಗಳಲ್ಲಿನ ನೀತಿಗಳನ್ನು ಸಮರ್ಥಿಸುವುದಕ್ಕಾಗಿಯೇ ಭಿನ್ನಮಾರ್ಗಗಳಿಂದ ರಾಜ ನೈತಿಕ ವ್ಯಾಖ್ಯೆಗಳು ಉದ್ಧೃತಗೊಳ್ಳುತ್ತವೆ. ಕೃತಿಯಲ್ಲಿ ಹಾಸ್ಯ ಹಾಗೂ ಕರುಣಾರಸಗಳು ಸಾಗಿಬರುತ್ತವೆ ಎಂಬ ಅಭಿಪ್ರಾಯವು ರಾಗೌದಾಗಿದೆ. ಇದು ಕೃತಿಯ ಮೌಲ್ಯವನ್ನು ನಿರ್ಣಯಿಸುತ್ತದೆ. ಹೇಳಬೇಕಾದುದನ್ನು ನೇರವಾಗಿ ಹಾಗೂ ಸ್ಪಷ್ಟವಾಗಿ ಹೇಳಲಾಗಿದೆ. ಒಟ್ಟಾರೆ ಪಂಚತಂತ್ರವು ಜಾಗತೀಕ ಮಟ್ಟದಲ್ಲಿ ನಿಲ್ಲುವಂತ ಶ್ರೇಷ್ಠ ಕೀರ್ತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗುತ್ತದೆ ಎಂಬ ಅಭಿಪ್ರಾಯವನ್ನು ಕೃತಿ ನೀಡುತ್ತದೆ.

ಕೆ.ಎಸ್. ನರಸಿಂಹಸ್ವಾಮಿ ಎಂಬುದು ನವಕರ್ನಾಟಕ ಪ್ರಕಾಶನದಿಂದ ಮೂಡಿ ಬಂದಿರುವ ರಾಗೌ ಅವರ ಪುಸ್ತಕ ಇದು ೨೦೦೨ರಲ್ಲಿ ಪ್ರಕಟವಾಗಿದೆ. ಈ ಗ್ರಂಥದಲ್ಲಿ ಕೆ.ಎಸ್. ನರಸಿಂಹಸ್ವಾಮಿ ಅವರ ಸಮಗ್ರ ಸಾಹಿತ್ಯವನ್ನು ವಸ್ತು ನಿಷ್ಠವಾಗಿ ಪ್ರತಿಬಿಂಬಿಸಿದ್ದಾರೆ. ಇದು ರಾಗೌ ಅವರ ಅಧ್ಯಯನ ಮತ್ತು ಅಧ್ಯಾಪನಗಳ ಫಲದಿಂದ ಮೂಡಿದುದೇ ಆಗಿದೆ. ಕೆ.ಎಸ್. ನರಸಿಂಹಸ್ವಾಮಿ ಅವರನ್ನು ಕುರಿತು ಅಧ್ಯಯನಶೀಲರಾದವರಿಗೆ ಈ ಕೃತಿ ಜ್ಞಾನ ಭಂಡಾರದಂತೆ ತೋರುತ್ತದೆ. ಕನ್ನಡ ಸಾಹಿತ್ಯ ಜಗತ್ತಿಗೆ ಈ ಕೃತಿ ಅಮೂಲ್ಯ ಕೊಡುಗೆಯಾಗಿದೆ. ಕೆ.ಎಸ್. ನರಸಿಂಹಸ್ವಾಮಿ ಕನ್ನಡ ಸಾಹಿತ್ಯದ ಪ್ರೇಮ ಕವಿ ಇವರನ್ನು ಕುರಿತು ಬರೆಯುವುದು ಸುಲಭದ ಕೆಲಸವಲ್ಲ. ಬಹಳ ಎಚ್ಚರಿಕೆಯಿಂದ ಪ್ರತಿ ವಿಷಯವನ್ನು ಬರೆಯಬೇಕಾಗುತ್ತದೆ. ಕವಿಗೂ ಹಾಗೂ ಕೃತಿಗೂ ನ್ಯಾಯ ಸಲ್ಲುವಂತೆ ರಾಗೌ ಸೂಕ್ಷ್ಮ

ದೃಷ್ಟಿಯಿಂದ ವಿವೇಚಿಸಿ ಕೆ.ಎಸ್.ಎನ್. ಅವರ ಬದುಕು ಹಾಗೂ ಸಾಹಿತ್ಯವನ್ನು ಅವಲೋಕಿಸಿದ್ದಾರೆ.

ರಾಗೌ ಅವರ ವಿಮರ್ಶಾ ಕೃತಿಗಳ ಪರಿಶೀಲನೆಯಿಂದ ಅವರ ವಿಮರ್ಶಾ ಶೈಲಿಯನ್ನು ಪರಿಗ್ರಹಿಸುವುದಾದರೆ :-

☞ ರಾಗೌ ಅವರು ವಿಮರ್ಶೆಗೆ ಆಯ್ದು ಕೊಂಡ ಕೃತಿಗಳು ಅಥವಾ ವಿಷಯ ಪ್ರಶಂಸಿಸುವಂತಹದು.

☞ ವಿಮರ್ಶಾ ಲೇಖನಗಳು ಹೆಚ್ಚು ವಿವರಣಾತ್ಮಕವಾಗಿದೆ.

☞ ರಸ ಚಿಂತನೆ ಹಾಗೂ ದರ್ಶನ ವಿಮರ್ಶೆಗಳಾಗಿವೆ.

☞ ಲೇಖನವು ವಿಮರ್ಶಾತ್ಮಕ ಶಿಸ್ತು ಸೂಕ್ಷ್ಮತೆ ಮತ್ತು ವಿವರಣೆಯ ಮೊನಚನ್ನು ಹೊಂದಿದೆ

☞ ವಿಮರ್ಶೆಯಲ್ಲಿ ಅನುಭವ ಮತ್ತು ಅಭಿವ್ಯಕ್ತಿಗಳೆರಡನ್ನು ಕುರಿತು ಮೌಲ್ಯ ಮಾಪನ ಕಂಡುಬರುತ್ತದೆ.

**ಉದಾ:-** 'ಕಾರಂತರ ಗೀತನಾಟಕಗಳು', 'ಡಿವಿಜಿಯವರ ಮಂಕುತಿಮ್ಮನ ಕಗ್ಗ', ಮತ್ತು 'ವೆಂಕಣ್ಣಯ್ಯನವರ ವಿಮರ್ಶೆ'.

[೩]ಪ್ರಾಚೀನ ಕವಿ ಅಥವಾ ಸಾಹಿತ್ಯ, ನವೋದಯ ಅದರಲ್ಲೂ ಕುವೆಂಪು,ಕಾರಂತ,ಪುತಿನರ ಕೃತಿಗಳನ್ನು ಕುರಿತ ರಾಗೌ ಅವರ ವಿಮರ್ಶೆ ಬರವಣಿಗೆಯಲ್ಲಿ ಆಪ್ತತೆಯನ್ನು ಉಳಿಸಿ ಕೊಂಡಿರುವುದರ ಜೊತೆಗೆ ಅಧಿಕೃತತೆಯನ್ನು ಪಡೆದುಕೊಳ್ಳುತ್ತದೆ. ಇಂತಹ ವಿಮರ್ಶೆ ಮೂಲಕ ಪ್ರಾಚೀನ ಸಾಹಿತ್ಯವನ್ನು ಕುರಿತು ಶ್ರೇಷ್ಠ ವಿಮರ್ಶಕರ

ಸಾಲಿಗೆ ರಾಗೌ ಕೂಡ ಸೇರುತ್ತಾರೆ.ವಿಷಯ ವಿಶ್ಲೇಷಣೆ ಮತ್ತು ಮೌಲ್ಯ ನಿರ್ಧಾರದಲ್ಲಿ ಖಚಿತತೆ ಇದೆ. ಭಾಷೆ, ಛಂದಸ್ಸು ಮತ್ತು ಗೇಯಗುಣಗಳನ್ನು ಕುರಿತಂತೆ ಇವರು ಉನ್ನತಾಭಿಪ್ರಾಯಗಳನ್ನು ವ್ಯಕ್ತ ಪಡಿಸಿದ್ದಾರೆ.ಒಂದು ವಿಷಯ ಅಥವಾ ಅಭಿಪ್ರಾಯದ ಸರ್ಮಥನೆಗಾಗಿ ಇನ್ನೊಂದು ಕೃತಿ ಅಥವಾ ಅಭಿಪ್ರಾಯವನ್ನು ಉದಾಹರಣೆಗಾಗಿ ತರುವಲ್ಲೀನ ಓದಿನ ವ್ಯಾಪಕತೆಯನ್ನು ಮೆಚ್ಚಿಕೊಳ್ಳಬೇಕಾಗುತ್ತದೆ.[೩]

ರಾಗೌ ಅವರ ವಿಮರ್ಶೆಯ ಭಾಷೆಯ ಬಗ್ಗೆ ಹೇಳುವುದಾದರೆ ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕವಾದುದು.ಒಟ್ಟಾರೆ ರಾಗೌ ವಿಮರ್ಶೆಯಲ್ಲಿ ದರ್ಶನ ವಿಮರ್ಶೆ ಪೋಷಕಾಂಶಗಳು ಹಾಗೂ ಪ್ರಾಯೋಗಿಕ ವಿಮರ್ಶೆಯ ಸೂಕ್ಷ್ಮತೆಗಳು ಸಮ್ಮಿಲನಗೊಂಡಿದೆ. ಈ ವಿಶೇಷತೆಯೆ ರಾಗೌ ಅವರನ್ನು ವಿಮರ್ಶೆ ಕ್ಷೇತ್ರದಲ್ಲಿ ಅಗ್ರಗಣ್ಯರಾಗಿ ಮಾಡಿದೆ.

---

## ಅಡಿ ಟಿಪ್ಪಣಿ

[೧-೧.] ರಾಘವಾಂಕ, ಡಾ॥ರಾಗೌ, ಮೈಸೂರು ಪ್ರಸಾರಂಗ, ೧೯೯೭

[೨-೨.] ರಾಘವಾಂಕ, ಡಾ॥ರಾಗೌ, ಮೈಸೂರು ಪ್ರಸಾರಂಗ, ೧೯೯೭

[೩-೩.] ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬, ಪುಟ ೪೯೬

# ಅಧ್ಯಾಯ–೪

## ಡಾ.ರಾಗೌ ಅವರ ಸಂಶೋಧನಾ ಕೃತಿಗಳು

'ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು' (೧೯೯೨) ರಾಗೌ ರಚಿಸಿದ ಮಹತ್ವದ ಕೃತಿಗಳಲ್ಲಿ ಒಂದು. ಅವರ ಸಂಶೋಧನ ಕೃತಿಗಳಲ್ಲಿ ಶಿಖರ ಪ್ರಾಯವಾದದ್ದು . ಪಿ.ಎಚ್. ಡಿ ಪದವಿಗಾಗಿ ಸಂಶೋಧನೆಯನ್ನು ಕೈಗೊಂಡು ಹದಿನೈದು ವರ್ಷಗಳ ದೀರ್ಘಕಾಲ ಪರಿಶ್ರಮ ಪಟ್ಟಿದ್ದರ ಫಲವಾಗಿ ರಚಿತವಾದ ಮಹಾ ಪ್ರಬಂಧ ಇದು. ಕನ್ನಡದಲ್ಲಿ ಇದುವರೆಗೆ ಪ್ರಕಟವಾಗಿರುವ ಇಂತಹ ಇಪ್ಪತ್ತು ಶ್ರೇಷ್ಠ ಕೃತಿಗಳಲ್ಲಿ ಇದೂ ಒಂದು ಎಂಬ ಅಗ್ಗಳಿಕೆಯ ಮಾನ್ಯತೆಯನ್ನು ವಿದ್ವಾಂಸರಿಂದ ಇದು ಪಡೆದು ಕೊಂಡಿದೆ. ಈ ಮಹಾ ಪ್ರಬಂಧಕ್ಕೆ ಮೈಸೂರು ವಿಶ್ವ ವಿದ್ಯಾನಿಲಯ ೧೯೯೦ರಲ್ಲಿ ಪಿ.ಎಚ್.ಡಿ. ಪದವಿಯನ್ನು ಕೊಟ್ಟಿದೆ.

ಅಂದರೆ ಸುಮಾರು ೧೯೭೫ರಲ್ಲಿ ಈ ಕಾರ್ಯಕ್ಕಾಗಿ ನೋಂದಣಿ ಮಾಡಿಸಲಾಗಿದೆ. .ರಾಗೌ ಇತರ ಶಿಸ್ತಿನ ಅಧ್ಯಯನದ ಜೊತೆಗೆ ಇತಿಹಾಸ ಗ್ರಂಥಗಳು, ಶಾಸನಗಳು , ಪ್ರಾಚೀನ ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡಿಕೊಂಡು ಈ ಸಂಶೋಧನಾ ಕಾರ್ಯವನ್ನು ನಿರ್ವಹಿಸಿ ಕೊಂಡು ಬಂದಿದ್ದಾರೆ. ಆದ್ದರಿಂದ ೧೯೭೧ ರಿಂದ ೧೯೯೦ರ ಅವಧಿಯಲ್ಲಿ ರಾಗೌ ವಿಸ್ತರಿಸಿ ಕೊಂಡ ತಮ್ಮ ವಿದ್ವತ್ತಿನ ಹರಹಿನಲ್ಲಿ ಅಂತರ ಶಿಸ್ತೀಯ ಅಧ್ಯಾಯನಕ್ಕೆ ಒಳಪಟ್ಟ ಈ ವಿಷಯವೂ ತುಂಬಾ ಮಹತ್ವದ್ದೆನಿಸುತ್ತದೆ.

ಕನ್ನಡ ಸಾಹಿತ್ಯದ ಆರಂಭ ಕಾಲದಿಂದ ಹಿಡಿದು ಮೈಸೂರಿನ ಒಡೆಯರ ಕಾಲದ ಸಾಹಿತ್ಯ ಕೊನೆಗೊಳ್ಳುವವರೆಗಿನ ಸುಮಾರು ಒಂದು ಸಾವಿರ ವರ್ಷಗಳ ದೀರ್ಘಾವಧಿಯಲ್ಲಿ ಕನ್ನಡದಲ್ಲಿ ರಚಿತವಾದ ಕಾವ್ಯಗಳು ದಾಖಲಿಸಿರುವ ಐತಿಹಾಸಿಕ ವಿಚಾರಗಳನ್ನು ಸಂಗ್ರಹಿಸಿ ಆಧಾರಗಳೊಡನೆ ಅವುಗಳನ್ನು ಪರಿಶೀಲಿಸಿ ಇತಿಹಾಸದ ಪುನರ್ರಚನೆಗೆ ನೆರವಾಗುವ ಅಂಶಗಳನ್ನು ಪೃಥ:ಕರಿಸಿ ಕೊಡುವುದು ಇಲ್ಲಿ ನಡೆದಿರುವ ಕೆಲಸ.

ಈ ಕೃತಿಯ ಮೂಲಕ ಪೂರ್ಣ ಪ್ರಮಾಣದಲ್ಲಿ ರಾಗೌ ಅವರು ಇತಿಹಾಸದ ವಿದ್ವಾಂಸರು ಎಂಬುದನ್ನು ಸಾಬೀತು ಪಡಿಸಿಕೊಂಡಿದ್ದಾರೆ. ರಾಗೌ ಅವರಿಗೆ ಇತಿಹಾಸದ ಮೇಲೆ ಇರುವ ಪ್ರೀತಿ, ಆಸಕ್ತಿ, ಶ್ರದ್ಧೆಯ ಫಲವಾಗಿ ಈ ಕೃತಿ ಮೂಡಿ ಬಂದಿದೆ. ಇದು ರಾಗೌ ಅವರ ಸಾಹಿತಿಕ ಬದುಕಿನ ಒಂದು ಮೈಲುಗಲಾಗಿದೆ. ದೊಡ್ಡ ವ್ಯಾಪ್ತಿಯ ವಿಷಯವನ್ನಾಧರಿಸಿ ಮಹಾ ಪ್ರಬಂಧ ರಚಿಸಿದ ರಾಗೌ, ಇತಿಹಾಸ ಮತ್ತು ಸಾಹಿತ್ಯಗಳ ಮೂಲ ಸ್ವರೂಪ, ಅತಿ–ಮಿತಿ ಉಪಯೋಗ ಇತ್ಯಾದಿಯನ್ನು ವಿಶದವಾಗಿಯೇ ಚರ್ಚಿಸಿದ್ದಾರೆ. ಸುಮಾರು ಒಂದು ಸಾವಿರ ವರ್ಷದ ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಿ ಐತಿಹಾಸಿಕ ವಿಚಾರಗಳನ್ನು ನಿರೂಪಿಸಿದ್ದಾರೆ. ಅಂದರೆ ಇವರ ಸಂಶೋಧನೆಯ ವ್ಯಾಪ್ತಿ ' ಕವಿರಾಜ ಮಾರ್ಗ'ದಿಂದ ಕೆಳದಿ ನೃಪವಿಜಯ' ದವರಿಗೆ ಇದು ಎಂಥಾ ಜಟಿಲ ಕೆಲಸವೆಂಬುದು ಅವರ 'ಅರಿಕೆ'ಯನ್ನು ಗಮನಿಸಿದರೆ ಮನದಟ್ಟಾಗುತ್ತದೆ.

ಈ ಕಾರ್ಯವನ್ನು ರಾಗೌ ಅವರು ಮೂರು ಹಂತಗಳಲ್ಲಿ ನಿರ್ವಹಿಸಿದ್ದಾರೆ. ಮೊದಲ ಹಂತದಲ್ಲಿ ಕಾವ್ಯಗಳಲ್ಲಿಯ ಚಾರಿತ್ರಿಕ ಸಂಗತಿಗಳನ್ನೆಲ್ಲಾ ಸಂಗ್ರಹಿಸಿದ್ದಾರೆ. ಎರಡನೆಯ ಹಂತದಲ್ಲಿ ಇತಿಹಾಸದ ಸಂದರ್ಭಗಳಲ್ಲಿ ಅವುಗಳನ್ನೆಲ್ಲಾ ಚರ್ಚಿಸಿದ್ದಾರೆ. ಮೂರನೇಯ ಹಂತದಲ್ಲಿ ಶಾಸನನಾಧಾರಗಳ ಮೂಲಕ ಸಮರ್ಥಿಸಿದ್ದಾರೆ. ಇದು ಇತಿಹಾಸದ 'ವೈಜ್ಞಾನಿಕ ಅಧ್ಯಯನ ಕ್ರಮ' ವನ್ನು ಆಧರಿಸಿರುವಂಥಾದ್ದು, ಕನ್ನಡ ಕಾವ್ಯಗಳ ಐತಿಹಾಸಿಕ ಅಧ್ಯಯನದ ಮೂಲಕ ಇತಿಹಾಸವನ್ನು ಕಟ್ಟುವ ಪ್ರಯತ್ನ ರಾಗೌ ಮಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಇದೇ ಮೊದಲ ಬಾರಿಗೆ ಸಮಗ್ರವಾಗಿ ಇಂಥಾ ಅಧ್ಯಯನ ನಡೆದಿದೆ. ಎಂದರೆ ಅತಿಶಯೋಕ್ತಿಯೆನ್ನಲ್ಲ. ಕನ್ನಡ ಕಾವ್ಯಗಳಲ್ಲಿ ಅಡಗಿರುವ ಅಮೂಲ್ಯ ಐತಿಹಾಸಿಕ ವಿಚಾರವನ್ನು ಅನಾವರಣ ಮಾಡುವ ಸಂಶೋಧಿಸುವ ಈ ನಿಬಂಧದಿಂದ ಸಾಹಿತ್ಯ ಮತ್ತು ಇತಿಹಾಸಗಳೆರಡಕ್ಕೂ ಉಪಯೋಗವಾಗಬಹುದು.

ಅಧಿಕೃತತೆ, ಭಾಷೆಯ ಪ್ರಬುದ್ಧತೆಯಿಂದಾಗಿ ರಾಗೌ ಅವರ ಈ ಮಹಾ ಪ್ರಬಂಧ ಒಂದು ಆಶ್ಚರ್ಯಕರ ರಚನೆ ಎನಿಸಿದೆ.

ಕಾವ್ಯದಲ್ಲಿ ಅಡಗಿರುವ ಐತಿಹಾಸಿಕ ವಿಚಾರಗಳನ್ನು ಹೊರಗೆಳೆಯುವ ಸಾಹಿತ್ಯಕಾರನ ಕೆಲಸ, ಇತಿಹಾಸಕಾರನ ಪ್ರಯತ್ನದಷ್ಟೇ ಜಟಿಲವಾದುದು. ಸಾಹಿತ್ಯ ಕೃತಿಯೊಂದನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡುವುದು ಅಂಥಾ ಕೃತಿಯಿಂದ ಚಾರಿತ್ರಿಕ ವಿಚಾರಗಳನ್ನು ಸಂಗ್ರಹಿಸುವುದಕ್ಕಿಂತ ಭಿನ್ನವಾದುದು. ಹೀಗಾಗಿ ಸಾಹಿತ್ಯ ಮತ್ತು ಇತಿಹಾಸಗಳ ನಡುವಣ ಕೊಂಡಿಯನ್ನು ತಾತ್ವಿಕವಾಗಿ ವಿವರಿಸಿ ಕೊಳ್ಳಬೇಕಾಗುತ್ತದೆ. ಈ ಜಿಜ್ಞಾಸೆಯನ್ನು ಪರಿಹರಿಸಿಕೊಳ್ಳುವಲ್ಲಿ ತಕ್ಕ ಮಟ್ಟಿಗೆ ಸೂಕ್ಷ್ಮ ಚಿಂತನೆ ನಡೆಸುತ್ತಾರೆ ರಾಗೌ.

ಪ್ರಕಟಿತ ಶಿಷ್ಟ ಮಹಾಕಾವ್ಯಗಳನ್ನಷ್ಟೇ ಆಧರಿಸಿರುವ ರಾಗೌ ತಮ್ಮ ಅಧ್ಯಯನವನ್ನು 'ಚಾರಿತ್ರಿಕ ಅಧ್ಯಯನ'ವೆಂದು ಕರೆದಿದ್ದಾರೆ. ರಾಗೌ ದೃಷ್ಟಿಯಲ್ಲಿ ಮಾನವನ ಬಗೆಗೆ ಮಾನವ ಕುರಿತು ಚಿಂತಿಸುವ ಸ್ಪಷ್ಟವಾದ ಕುರುಹೇ ಇತಿಹಾಸ. ಮಾನವ ನೆಲೆಯ ಸಾಹಿತ್ಯ ಇತಿಹಾಸ ಸಂಬಂಧ ಕುರಿತು ಹೇಳುವಾಗ ಸಾಹಿತ್ಯಕ್ಕೂ ಮೂಲ ಸಾಮಾಗ್ರಿ ಮಾನವನೇ ಆಗಿರುವುದರಿಂದ, ಈ ಹಂತದಲ್ಲಿ ಇತಿಹಾಸಕ್ಕೂ ಸಾಹಿತ್ಯಕ್ಕೂ ವ್ಯತ್ಯಾಸ ಉಳಿಯುವುದಿಲ್ಲವೆನ್ನುತ್ತಾರೆ.

"ಐತಿಹಾಸಿಕ ಕಾವ್ಯಗಳಲ್ಲಿ ಹೊಸ ಬಗೆಯ ಕಾವ್ಯವನ್ನೇ ಕಾಣುತ್ತೇವೆ. ಇವುಗಳಲ್ಲಿ ಇತಿಹಾಸಕ್ಕೂ ಕಲೆಗೂ ಸಮಾನವಾಗಿ ನ್ಯಾಯ ದೊರಕಿಸಬೇಕಾಗಿರುತ್ತದೆ. ಚರಿತ್ರೆಯನ್ನೇ ಹೇಳಲು ಹೊರಟರೆ ಕಾವ್ಯ ಕಷ್ಟವಾಗುವುದು ಕಾವ್ಯಕ್ಕೆ ಹೆಚ್ಚು ಒಲವು ತೋರಿದರೆ ಚರಿತ್ರೆ ನಷ್ಟವಾಗಬಹುದು. ಈ ದ್ವಂದ್ವವನ್ನು ಅರಗಿಸಿಕೊಳ್ಳುವುದು ಕಷ್ಟ ಸಾಧ್ಯವಾದ ಕೆಲಸ. ಇಂತಹ ಸಂದರ್ಭಗಳಲ್ಲಿ ಚರಿತ್ರೆಯನ್ನು ಹೇಳುತ್ತಲೇ ಕಲ್ಪನೆಗಳು ಗರಿಗಟ್ಟಿಕೊಳ್ಳುತ್ತಾ ಹೋಗುತ್ತವೆ. ಕೆಲವು ಸಾರಿ ಈಗಾಗಲೇ ಕಲ್ಪನೆಗಳು ಸೇರಿ ಹೋದ ಇತಿಹಾಸ ಕಾವ್ಯಕ್ಕೆ ವಸ್ತುವಾಗುತ್ತದೆ.

ನಮ್ಮ ಕವಿಗಳು ಮೊದಲು ಕವಿಗಳು, ಆ ಮೇಲೆ ಇತಿಹಾಸಕಾರರು. ಆದ್ದರಿಂದಲೇ ಚರಿತ್ರೆಯ ಜೊತೆಗೆ ಕಲ್ಪನೆಯೂ ಬೆರೆಯುತ್ತದೆ. ಒಟ್ಟಿನಲ್ಲಿ ಈ ಬಗೆಯ ಪರಿಶೀಲನೆ ಕರ್ನಾಟಕದ ಇತಿಹಾಸವನ್ನು ಕಟ್ಟುವುದರಲ್ಲಿ ನೆರವಾಗುವುದು ಮಾತ್ರವಲ್ಲದೆ, ಆಯಾ ಕಾವ್ಯದ ಮರುಚಿಂತನೆಗೂ ದಾರಿ ಮಾಡಿಕೊಡುತ್ತದೆ."[೧] ಎಂಬುದು ರಾಗೌ ನಿಲುವು.

ಇತಿಹಾಸ, ಸಾಹಿತ್ಯ, ಮತ್ತು ಕಲೆಗಳ ಪರಸ್ಪರ ಸಂಬಂಧ ಕುರಿತು ರಾಗೌ ನಡೆಸುವ ಚರ್ಚೆಯಾಗಲಿ, ಅದನ್ನು ಮುಂದುವರಿಸಲು ಬಳಸಿಕೊಳ್ಳುವ ಹೇಳಿಕೆಯಾಗಲಿ ಕುತೂಹಲಕಾರಿಯಾಗಿವೆ. ಸಾಹಿತ್ಯ ಮತ್ತು ಇತಿಹಾಸಗಳ ನಡುವಣ ಸಮನ್ವಯತೆ ಸಾಧಿಸಲು ಅವರು ವಸ್ತು ನಿಷ್ಠ ವಿವೇಚನೆ ಕೈಗೊಂಡಿರುವುದು ಈ ಅಧ್ಯಯನದ ಮಟ್ಟಿಗೆ ಪರಿಗಣನಾರ್ಹ ಅಂಶ. ರಾಗೌ ಅವರು ತಮ್ಮ ಸಮರ್ಥನೆಗಾಗಿ ಬಳಸಿಕೊಳ್ಳುವುದು ಎಲಿಯಟ್, ಕಾಲಿಂಗ್ ವುಡ್, ಟಾಯ್ನ್‌ಬಿ, ಕ್ರೋಚೆ, ಕೆಲ್ಲೆಟ್, ಮುಲ್ಲರ್, ಸ್ಮಿತ್, ಫ್ರಿಟ್ಜರ್ ಸ್ಟನ್, ನೀಲಕಂಠ ಶಾಸ್ತ್ರಿ, ಶ್ರೀಕಂಠಶಾಸ್ತ್ರಿ, ಮಜುಂದಾರ್, ಪಾಠಕ್ ಮೊದಲಾದ ಪ್ರಸಿದ್ಧ ಪಾಶ್ಚಿಮಾತ್ಯ ಮತ್ತು ಭಾರತೀಯ ಚರಿತ್ರಕಾರರು, ವಿಮರ್ಶಕರು, ಹಾಗೂ ಕಲಾಚಿಂತಕರ ವಿಚಾರಗಳನ್ನು ಇವರೆಲ್ಲರೊಡನೆ ಅಮೇರಿಕಾದ ಪ್ರತಿಷ್ಠಿತ ಇತಿಹಾಸಕಾರ ಅಲ್ಲನ್ ನೆವಿನ್ಸ್ ಈಚಿನ ಫ್ರಾಂಕ್ ಕೆರ್ ಮೋಡ್ ಹಾಗೂ ಸೀಲ್ ಕ್ಲೈವ್ ಅವರ ವಿಚಾರಗಳನ್ನು ಇಲ್ಲಿ ಪ್ರತ್ಯೇಕವಾಗಿ ಗಮನಿಸಬಹುದು. ಇತಿಹಾಸ ಮತ್ತು ಸಾಹಿತ್ಯಗಳೆರಡರ ಅವಿನಾಭಾವ ಸಂಬಂಧ ಕುರಿತು ಚರ್ಚಿಸಲೆತ್ನಿಸುತ್ತವೆ ಇವರ ಕೃತಿಗಳು. ಸಾಹಿತ್ಯದ ಮೂಲಕ ಸಮಕಾಲೀನ ಇತಿಹಾಸ ಕಟ್ಟುವ ಕೆಲಸದಲ್ಲಿ ರಾಗೌ ಅವರು ಯಶಸ್ವಿಯಾಗಿದ್ದಾರೆ. ಕಾವ್ಯಗಳನ್ನಷ್ಟೇ ಆಧರಿಸಿ ಇತಿಹಾಸ ಬರೆಯುವ ಸಾಧ್ಯತೆಯನ್ನು ತೋರಿಸಿಕೊಟ್ಟವರಲ್ಲಿ ರಾಗೌ ಪ್ರಥಮಿಗರು ಎಂದು ಹೇಳಬಹುದು.

ಕನ್ನಡ ಹಾಗೂ ಇತಿಹಾಸ ಕ್ಷೇತ್ರಗಳಿಗೆ ಇದೊಂದು ವಿಶಿಷ್ಟ ಕೊಡುಗೆ. ಈ ಬಗೆಯ ಅಧ್ಯಯನ ಕನ್ನಡದಲ್ಲಿ ಇಷ್ಟು ಸಮಗ್ರವಾಗಿ ಈವರೆಗೆ ನಡೆದಿಲ್ಲ. ಆದುದರಿಂದ ಕನ್ನಡ

ಸಂಶೋಧನಾ ಕ್ಷೇತ್ರಕ್ಕೆ ಇದೊಂದು ಅನನ್ಯ ಸೇರ್ಪಡೆ .ಇಂತಹ ಸೇರ್ಪಡೆಯೊಂದರ ಹಿಂದೆ ಅಪಾರ ಪರಿಶ್ರಮವಿರುತ್ತದೆ. ಅಂತಹ ಪರಿಶ್ರಮಕ್ಕೆ ಸಿಲುಕಿಕೊಂಡು ಮನಸ್ಸು ನಾನಾ ತಾಕಲಾಟಗಳನ್ನು ಅನುಭವಿಸುತ್ತದೆ. ತಾಕಲಾಟಗಳಿಗೆ ಒಳಗಾದಾಗಲೆಲ್ಲಾ ರಾಗೌ ಹಿಡಿದ ಕಾರ್ಯವನ್ನು ಬಿಡಬಾರದೆಂಬ  ದೃಢ ನಿಲುವಿನೊಡನೆ ಮುನ್ನಡೆದಿದ್ದಾರೆ. ಪಿ. ಎಚ್.ಡಿ ಪದವಿಯ ಅಧ್ಯಯನಕ್ಕಾಗಿ ನೋಂದಾಯಿಸಿ ಕೊಂಡಾಗ ಉಪನ್ಯಾಸಕರಾಗಿದ್ದ ಅವರು ಹದಿನೈದು ವರ್ಷಗಳ ನಂತರ ಅದನ್ನು ಮುಗಿಸಿದಾಗಲೂ ಉಪನ್ಯಾಸಕರಾಗಿಯೇ ಇದ್ದರು.

**೨೦೦೫ ರಲ್ಲಿ ಪ್ರಕಟವಾದ "ಷಷ್ಠಿ ಸಂಪದ"** ' ರಾಗೌ ಅವರ ಇನ್ನೊಂದು ಗ್ರಂಥ. ೨೦೦೨ ಏಪ್ರಿಲ್‌ಗೆ ರಾಗೌ ಅವರಿಗೆ ಅರುವತ್ತು ವರ್ಷಗಳು ಪೂರೈಸಿದವು. ಇದರ ನೆನಪಿಗಾಗಿ ಸಂವಹನ ಪ್ರಕಾಶನ ಈ ಪುಸ್ತಕವನ್ನು ಪ್ರಕಟಿಸಿದೆ. ೬೦ ಲೇಖನಗಳಿರುವ ೬೦೦ ಪುಟಗಳ ಗ್ರಂಥ ಇದು. ಸಾಹಿತ್ಯ ವಿಮರ್ಶೆ , ಸಂಶೋಧನೆ ಜಾನಪದ , ಭಾಷೆ ಮತ್ತು ಸಂಸ್ಕೃತಿ ಎಂದು ನಾಲ್ಕು ವಿಭಾಗಗಳಲ್ಲಿ ಇಲ್ಲಿನ ಲೇಖನಗಳನ್ನು ವರ್ಗೀಕರಿಸಿ ಕೊಡಲಾಗಿದೆಯಾದರೂ ಪ್ರಧಾನ ನೆಲೆಯಲ್ಲಿ ಕೆಲಸ ಮಾಡಿರುವುದು ಸಂಶೋಧನೆಯೆ; ಅನಂತರದ ಸ್ಥಾನ ವಿಮರ್ಶೆಯದು 'ಸ್ನಾತಕೋತ್ತರ ವಿಭಾಗದಲ್ಲಿ ಕೆಲಸ ಮಾಡುವಾಗ ಸಂಶೋಧನೆ ಒಂದು ಅನಿವಾರ್ಯ ಕ್ರಿಯೆ' ಎನ್ನುವ ರಾಗೌ ತಮ್ಮ ಬರವಣಿಗೆಯ ಆರಂಭದ ದಿಶೆಯಲ್ಲಿಯೇ ಸಂಶೋಧನಾ ಲೇಖನವನ್ನು ಬರೆದು ಪ್ರಕಟಿಸಿದ್ದಾರೆ . ಅವರ ವಿಮರ್ಶಾ ಸಂಕಲನಗಳಲ್ಲಿ ಸಂಶೋಧನ ಲೇಖನಗಳು ಸೇರಿವೆ .' 'ಷಷ್ಟಿಸಂಪದ' ದಲ್ಲಿ ಈ ಬಗೆಯ ಹಲವಾರು ಲೇಖನಗಳು ಸಮಾವೇಶ ಗೊಂಡಿವೆ . ಇದರ ಸಾಹಿತ್ಯ ವಿಮರ್ಶೆಯ ಭಾಗದಲ್ಲಿ ೨೫ ಸಂಶೋಧನೆಯ ಭಾಗದಲ್ಲಿ ೧೩, ಜಾನಪದ ಭಾಗದಲ್ಲಿ ೧೪, ಭಾಷೆ ಮತ್ತು ಸಂಸ್ಕೃತಿ ಭಾಗದಲ್ಲಿ ೮ ಲೇಖನಗಳು ಸೇರಿವೆ .

ಎಂದಿನಂತೆ ಈ ಗ್ರಂಥದಲ್ಲಿಯು ಮನ ಸೆಳೆಯುವುದು ವಿಷಯ ವೈವಿಧ್ಯ, ಅರಿವಿನ ಹರವು ಹಾಗೂ ಸೂಕ್ಷ್ಮ ವಿವೇಚನೆ. ಕೃತಿಯ ಕೊನೆಯಲ್ಲಿ ಲೇಖನಗಳ ಸಂದರ್ಭ ಸೂಚಿಯೊಂದಿದೆ . ಇಲ್ಲಿನ ಬಹುತೇಕ ಲೇಖನಗಳು ೧೯೯೦ರ ನಂತರದಲ್ಲಿಯೇ ಬೇರೆ ಬೇರೆ ಕಾರಣಕ್ಕಾಗಿ ಸಿದ್ಧ ಪಡಿಸಿದವಾಗಿವೆ. ೧೯೯೦ಕ್ಕಿಂತ ಮೊದಲು ಬರೆದುವೂ ಕೆಲವು ಇಲ್ಲಿ ಸೇರಿರುವಂತಿದೆ, ಡಿ, ಎಲ್. ನರಸಿಂಹಾಚಾರ್ ಅವರ ಪೀಠಿಕೆಗಳು, ಲೇಖನಗಳು, ಗ್ರಂಥದ ಸಾಲಿಗೆ ಸೇರುವ ಕೃತಿ ಇದು . ಆದರೆ ವಿಷಯ ಹಾಗೂ ವಿಶ್ಲೇಷಣಾ ಮಾದರಿಯ ದೃಷ್ಟಿಯಿಂದ ಅನೇಕ ಅಂಶಗಳಲ್ಲಿ ಆ ಗ್ರಂಥಕ್ಕಿಂತ ಬೇರೆಯಾಗಿ ನಿಲ್ಲುತ್ತದೆ . ವಿಮರ್ಶೆ, ಕಾವ್ಯಮೀಮಾಂಸೆ, ಸಂಶೋಧನೆ, ಜಾನಪದ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಭಾಷಾವಿಜ್ಞಾನ, ವಿಜ್ಞಾನ ,ಇತಿಹಾಸ , ಆಧ್ಯಾತ್ಮ ಶಾಸ್ತ್ರ, ಧರ್ಮ ಇತ್ಯಾದಿ .ಪ್ರತ್ಯೇಕ ಶಿಸ್ತುಗಳ ಅರಿವಿನ ಬುನಾದಿ ಈ ಬರೆಹಗಳಲ್ಲಿ ಗೋಚರಿಸುತ್ತದೆ.



ಕನ್ನಡದ ಕವಿಗಳು, ಸಂಶೋಧಕರು ಹಾಗೂ ಜಾನಪದ ವಿದ್ವಾಂಸರಲ್ಲಿ ಕೆಲವರ ವ್ಯಕ್ತಿತ್ವದ ಚಿತ್ರಣಗಳೂ ಈ ಕೃತಿಯಲ್ಲಿವೆ. ರಾಗೌ ಕಾಲಕಾಲಕ್ಕೆ ಲೇಖನ ಸಂಗ್ರಹಗಳನ್ನು ಪ್ರಕಟಿಸುತ್ತಾ ಬಂದಿದ್ದರೂ ಆ ಸಂಗ್ರಹಗಳ ಸ್ವರೂಪಕ್ಕೆ ಅಳವಡದೆ ಅರವತ್ತರ ನೆಪದಲ್ಲಿ ಸಂಕಲನಗೊಳ್ಳಲು ಇಷ್ಟು ಲೇಖನಗಳು ಇದ್ದುವೆಂಬುದೇ ಒಂದು ಚೋದ್ಯದ ಸಂಗತಿಯಾಗಿದೆ.ಹಿರಿಯ ಕಿರಿಯ ಲೇಖಕರ ಕೃತಿಗಳಿಗೆ ಬರೆದ ಮುನ್ನುಡಿಗಳು ಇನ್ನೂ ಅನೇಕವು ಸಂಗ್ರಹಗೊಳ್ಳದೇ ಉಳಿದು ಮುನ್ನುಡಿ ಮಾಲೆಯ ಸಂಕಲನವೊಂದು ಇನ್ನೂ ಹೊರ ಬರಬೇಕಾಗಿದೆ. ರಾಗೌ ಅಧ್ಯಯನ ಹಾಗೂ ಬರೆಹದ ಕಾರ್ಯದಲ್ಲಿ ನಿರಂತರವಾಗಿ ತೊಡಗಿ ಕೊಂಡ ಹಾಗೂ ಅದನ್ನೇ ಏಕೈಕ ಕಾಯಕವಾಗಿ ಸ್ವೀಕರಿಸಿದ ವಿದ್ವಾಂಸರೆಂಬುದು ಇದರಿಂದ ಮತ್ತೊಮ್ಮೆ ದೃಡಪಡುತ್ತದೆ.

---

## ಅಡಿ ಟಿಪ್ಪಣಿ

೧-೧. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ೫೩೦

# ಅಧ್ಯಾಯ–೫

## ಜಾನಪದ ಅಧ್ಯಯನ

ರಾಗೌ ಅವರು ತಮ್ಮ ಬಹುಮುಖ ಪ್ರತಿಭೆಯಿಂದಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ನಲವತ್ತೈದಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಇವರು ಸೇವೆ ಸಲ್ಲಿಸಿದ ಒಂದು ಮಹತ್ತರ ಕ್ಷೇತ್ರವೆಂದರೆ ಜಾನಪದ. ಜಾನಪದ ಕ್ಷೇತ್ರದ ಮೂರನೆ ತಲೆಮಾರಿನ ವಿದ್ವಾಂಸರಾಗಿ ರಾಗೌ ಗುರುತಿಸಿಕೊಂಡಿದ್ದಾರೆ. ಜಾನಪದ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸೈದ್ಧಾಂತಿಕ ನೆಲೆಯಲ್ಲಿ ವಿಶ್ಲೇಷಿಸಿದ ಕೀರ್ತಿ ರಾಗೌ ಅವರಿಗೆ ಸಲ್ಲುತ್ತದೆ. ಇವುಗಳಿಗೆ ಸಂಬಂಧಿಸಿದಂತೆ ಸುಮಾರು ಹನ್ನೆರಡು ಮಹತ್ವದ ಕೃತಿಗಳನ್ನು ರಾಗೌ ಪ್ರಕಟಿಸಿದ್ದಾರೆ.

ಅವುಗಳೆಂದರೆ ನಮ್ಮ ಗಾದೆಗಳು(೧೯೮೮), ಕಿಟೆಲ್ ಕೋಶದ ಗಾದೆಗಳು (೧೯೬೬), ಕರ್ನಾಟಕ ಜನಪದ ಕಥೆಗಳು( ೧೯೬೯), ನಮ್ಮ ಒಗಟುಗಳು (೧೯೭೦), ಜನಪದ ನಂಬಿಕೆಗಳು (೧೯೭೨), ಕನ್ನಡ ಶಿಶುಪ್ರಾಸಗಳು (೧೯೭೨); ಜನಪದ ರಾಮಾಯಣ (೧೯೭೩), ಜಾನಪದ ಸಂಕೀರ್ಣ (೧೯೭೮) ಜನಪದ ಸಾಹಿತ್ಯ ರೂಪಗಳು (೧೯೭೮), ಚಾಮಾಯಿ (೧೯೮೧), ಜನಪದ ಸಂಶೋಧನ (೧೯೮೧), ಜನಪದ ಆಟಗಳು (೨೦೦೧).

ಡಾ॥ ರಾಗೌ ಅವರು ಸಂಪಾದಿಸಿ ಪ್ರಕಟಿಸಿರುವ ನಮ್ಮ ಗಾದೆಗಳು ಕೃತಿ ಕನ್ನಡ ಜಾನಪದ ಲೋಕದ ಒಂದು ಗಮನಾರ್ಹ ಗ್ರಂಥವಾಗಿದೆ. ಈ ಕೃತಿಯನ್ನು ಎರಡು ನೆಲೆಗಳಲ್ಲಿ ಅರ್ಥೈಸಲಾಗಿದೆ. ಒಂದು ಗಾದೆಗಳನ್ನು ಶಿಷ್ಟವಲಯದ ಮೂಲಕ ಓದುಗರಿಕೆ ನೀಡುವುದು, ಇನ್ನೊಂದು ಗಾದೆಗಳನ್ನು ಸೈದ್ಧಾಂತಿಕ ವಿಚಾರಗಳ ಚರ್ಚೆ ಮತ್ತು ಸಾಂಸ್ಕೃತಿಕ

ನೆಲೆಯ ಅಧ್ಯಯನ ಈ ಕೃತಿಯ ಇನ್ನೊಂದು ಮಹತ್ವದ ಮುಖವಾಗಿದೆ. ಇದರಲ್ಲಿ ೨೨೦೦ ಗಾದೆಗಳನ್ನು ಸಂಪಾದಿಸಲಾಗಿದೆ.

ಗಾದೆಗಳ ಅಕಾರಾದಿ ಅಳವಡಿಕೆ, ಗಾದೆಯ ವಿವಿಧ ಪಾಠಾಂತರಗಳನ್ನು ಅಡಿ ಟಿಪ್ಪಣಿಯಲ್ಲಿ ನೀಡಿರುವುದು, ಹಾಗೆಯೇ ಗಾದೆಗಳ ಅರ್ಥ ಸಂವಹನಕ್ಕೆ ಅನಿವಾರ್ಯವಾಗಿರುವ ಜನಪದ ಪದಕೋಶದ ರಚನೆ- ಇವುಗಳಿಂದ ಈ ಕೃತಿ ಸಾರ್ಥಕ್ಯವನ್ನು ಪಡೆದಿದೆ. ಜನಪದ ಗಾದೆಗಳು ಜನ ಸಾಮಾನ್ಯರ ನುಡಿ ಪುಷ್ಪಗಳು, ಅವುಗಳನ್ನು ಒಂದು ಕಡೆ ಕಲೆಹಾಕುವ ಮಾಲೆ ಮಾಡುವ ಮಾಲೆಗಾರನ ಕೆಲವಷ್ಟೆ ನನ್ನದು ಎಂಬ ಮಾತಿನ ಮೂಲಕ ಗ್ರಾಮೀಣ ಪ್ರತಿಭೆಗೆ ಗೌರವವನ್ನು ರಾಗೌ ಸಲ್ಲಿಸುತ್ತಿದ್ದಾರೆ.

ರಾಗೌರವರು ಪಾಶ್ಚಿಮಾತ್ಯ ಜಾನಪದ ವಿದ್ವಾಂಸರಾದ ಜೆ.ಎ.ಕೆಲ್ಲೊ, ಥಾಮಸ್ ಮುಲ್ಲರ್, ಲಾರ್ಡ್‌ಜಾನ್ ರಸೆಲ್, ಇಸೆಲಿಯಸ್, ಎಸ್.ಜಿ.ಚಾಂಪಿಯನ್, ಜೇಮ್ಸ್ ಹೇಸ್ಟಿಂಗ್ಸ್ ಮುಂತಾದವರ ವಿಚಾರಗಳನ್ನು ತಮ್ಮ ಚರ್ಚೆಗೆ ಬಳಸಿಕೊಳ್ಳುವುದರ ಮೂಲಕ ರಾಗೌ ವ್ಯಾಪಕವಾಗಿ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಗಾದೆಗಳ ಪ್ರಾಚೀನತೆ, ಸ್ವರೂಪ, ಗ್ರಾಮೀಣರ ಸೃಜನಶೀಲ ಪ್ರತಿಭಾ ಸಾಮರ್ಥ್ಯ, ಗಾದೆಗಳ ಬಳಕೆಯ ಸಂದರ್ಭದಲ್ಲಿ ಇವುಗಳನ್ನು ರಾಗೌ ಇಲ್ಲಿ ವಿವರವಾಗಿ ಪ್ರಸ್ತಾಪಿಸಿದ್ದಾರೆ. ಪ್ರಾಮಾಣಿಕ ಪ್ರಯತ್ನ ಹಾಗೂ ಆಸಕ್ತಿಯಿಂದಾಗಿ ಈ ಕೃತಿ ಜನಪದ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ.

'ಕಿಟ್ಟೆಲ್ ಕೋಶದ ಗಾದೆಗಳು' ಕನ್ನಡಿಗರ ಚಿರಸ್ಮರಣೆಗೆ ಪಾತ್ರರಾದ ರೆವರೆಂಡ್ ಜೆ.ಎಫ್.ಕಿಟ್ಟೆಲ್‌ರ 'ಕನ್ನಡ- ಇಂಗ್ಲೀಷ್' ಶಬ್ದಕೋಶದಲ್ಲಿ ಸೇರ್ಪಡೆಯಾಗಿರುವ ಜನಪದ ಗಾದೆಗಳನ್ನು ಸಂಗ್ರಹಿಸಿಕೊಟ್ಟಿರುವ ಈ ಗ್ರಂಥ ಕಿಟ್ಟಲ್ಲರ ಜಾನಪದ ಕ್ಷೇತ್ರದ ಆಸಕ್ತಿಯನ್ನು ಅನಾವರಣಗೊಳಿಸುತ್ತದೆ. ಈ ಕೃತಿಯು ಕಿಟ್ಟೆಲ್ ಅವರ ಆಸಕ್ತಿ ಮತ್ತು ಪರಿಶ್ರಮದ ಮುಖಗಳನ್ನು ಎತ್ತಿ ತೋರಿಸುತ್ತದೆ. ಪ್ರಸ್ತುತ ಸಂಕಲನದಲ್ಲಿ ಒಟ್ಟು ನಾಲ್ಕು ಸಾವಿರದ

ನೂರ ಅರವತ್ತೆಂಟು ಗಾದೆಗಳಿವೆ. ಇಷ್ಟೊಂದು ಗಾದೆಗಳನ್ನು ಕಿಟ್ಟಲ್ ಸಂಗ್ರಹಿಸಿದ್ದರು ಎಂಬ ಸತ್ಯವೇ ಕನ್ನಡಿಗರಿಗೆ ಅಷ್ಟಾಗಿ ತಿಳಿದಿರಲಿಲ್ಲ. ರಾಗೌ ಅವರ ಜಾನಪದ ಕ್ಷೇತ್ರದ ಬಗೆಗಿನ ಆಸಕ್ತಿ ಹಾಗೂ ಸೂಕ್ಷ್ಮ ದೃಷ್ಟಿ ಸಂಗ್ರಹಿಸಲು ಅನುವು ಮಾಡಿ ಕೊಟ್ಟಿದೆ.

ರಾಗೌ ಕೃತಿ ಸಂಪಾದನೆಯ ಸಂದರ್ಭದಲ್ಲಿ ಜಾನಪದ ಶಿಸ್ತನ್ನು ಮರೆತ್ತಿಲ್ಲ. ಇಲ್ಲಿ ಸಂಗ್ರಹಿಸಿರುವ ಗಾದೆಗಳ ಮೂಲ ಶಬ್ಧ ಕೋಶದಲ್ಲಿ ಎಲ್ಲಿ ಬರುತ್ತದೆ. ಯಾವ ಶಬ್ದದ ಅರ್ಥವನ್ನು ಸ್ಪಷ್ಟಪಡಿಸಲು ಸಂಬಂಧಿಸಿದ ಗಾದೆಯನ್ನು ಕಿಟ್ಟಲ್ ಉಲ್ಲೇಖಿಸಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಅನುಕೂಲವಾಗುವಂತೆ ಪ್ರತಿಗಾದೆಯ ಪಕ್ಕದಲ್ಲಿ ಮೂಲ ಗ್ರಂಥದ ಪುಟ ಸಂಖ್ಯೆಯನ್ನು ರಾಗೌ ನೀಡಿದ್ದಾರೆ. ಈ ಮೂಲಕ ಸಂಪಾದನೆ ಕಾರ್ಯದ ಪ್ರಾಮಾಣಿಕತೆ ಹಾಗೂ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

'ಕರ್ನಾಟಕ ಜನಪದ ಕಥೆಗಳು' ರಾಗೌ ಅವರ ಜಾನಪದ ಸಂಗ್ರಹಗಳಲ್ಲಿ ಅತಿ ಮುಖ್ಯವಾದುದು. ಕನ್ನಡ ಜಾನಪದ ಅಧ್ಯಯನದ ಸಂದರ್ಭದಲ್ಲಿ ಸಹ; ಅಧ್ಯಯನ ಕ್ಷೇತ್ರಕಾರ್ಯ, ವರ್ಗೀಕರಣ, ಸಂಕಲನ, ಸಂಗ್ರಹ ಇವು ಈ ಗ್ರಂಥದಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯ. ರಾಗೌ ಅವರು ವೈಜ್ಞಾನಿಕ ಅಧ್ಯಯನದ ಮೂಲಕ ಕಥೆಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಅರವತ್ತಮೂರು ಕಥೆಗಳಿವೆ. ವರ್ಗೀಕರಣ ವಿಧಾನಕ್ಕನುಗುಣವಾಗಿ ಆಯಾ ವರ್ಗದ ಅಡಿಯಲ್ಲಿ ಕಥೆಗಳನ್ನು ಅಳವಡಿಸಿರುವುದು ಈ ಗ್ರಂಥದ ವಿಶೇಷಗಳಲ್ಲಿ ಒಂದು ಕಿನ್ನರ ಕಥೆಗಳು, ನೀತಿ ಕಥೆಗಳು ಪ್ರಾಣಿಕಥೆಗಳು, ಅತಿಮಾನುಷ ಕಥೆಗಳು, ವಿನೋದ ಕಥೆಗಳು, ಒಗಟಿನ ಕಥೆಗಳು ಎಂದು ಆರು ವರ್ಗಗಳಾಗಿ ಈ ಸಂಕಲನದ ಕಥೆಗಳನ್ನು ವರ್ಗೀಕರಿಸಲಾಗಿದೆ. ಈ ಬಗೆಯ ವರ್ಗೀಕರಣವು ಜಾನಪದೀಯ ಅಧ್ಯಯನ ಕ್ಷೇತ್ರದಲ್ಲಿ ಇದೆ ಮೊದಲು.

'ನಮ್ಮ ಒಗಟುಗಳು' ರಾಗೌ ಅವರ ಇನ್ನೊಂದು ಜಾನಪದ ಸಂಗ್ರಹ. ಈ ಒಗಟುಗಳು ಬುದ್ಧಿ ಪ್ರಧಾನವಾದುದು. ಇವುಗಳು ಜಾನಪದೀಯರಲ್ಲಿ ಇರುವ ಬೌದ್ಧಿಕತೆ ಹಾಗೂ ಸೃಜನಶೀಲತೆಯನ್ನು ಪ್ರತಿಬಿಂಬಿಸುತ್ತದೆ. ಇಂತಹ ಐದನೂರು ಹತ್ತು ಒಗಟುಗಳನ್ನು ರಾಗೌ ಈ ಕೃತಿಯಲ್ಲಿ ಸಂಪಾದಿಸಿ ಕೊಟ್ಟಿದ್ದಾರೆ.

ಗ್ರಾಮ ಜೀವನದ ಘಾಟು ವಾಸನೆಯಿರುವ ಇವನ್ನು ಗ್ರಾಮೀಣ ಪ್ರದೇಶದಿಂದಲೇ ನೇರವಾಗಿ ಸಂಗ್ರಹಿಸಲಾಗಿದೆ. ಇದಕ್ಕೆ ಪೂರಕವಾಗಿ ಒದಗಿಸಲಾಗಿರುವ ಪ್ರಸ್ತಾವನೆ ಭಾಗದಲ್ಲಿ ಮೂಡಿ ಬಂದಿರುವ ಗದ್ಯ ವಿಶೇಷವಾಗಿರುವಂಥದು ನಿದರ್ಶನಕ್ಕೆ ಕೆಲವು ವಾಕ್ಯಗಳು

[೧]"ಆದಿವಾಸಿ ಕಂಡುಕೊಂಡ ಅಭಿವ್ಯಕ್ತಿಯ ಹಲವು ಪ್ರಕಾರಗಳಲ್ಲಿ ಒಗಟೂ ಒಂದು. ಒಗಟು ಹಳ್ಳಿಯ ಬಾಳಿನ ಸಾರಿಗೆ ಹಾಕಿದೆ ಒಗ್ಗರಣೆ ಹಾರಿಸಿದ ಚಟಕಿ. ಜೀವನವೇ ಅದರ ಪರಿಕರ. ಆದರೆ ಜೀವನದಷ್ಟೇ ಅದು ಗೂಢತರ ಜಗತ್ತಿನ ಎಲ್ಲ ಕಡೆಗಳಲ್ಲೂ ಸಾರ್ವತ್ರಿಕವಾಗಿ ಹರಡಿಕೊಂಡಿರುವ ಇದು ಜನಾಂಗವೊಂದರ ಭಾಷೆ, ಸಂಸ್ಕೃತಿ ಹಾಗೂ ಸಾಹಿತ್ಯಗಳ ಮುಪ್ಪರಿಯಾಗಿದೆ." [೧]

[೨] ಒಗಟಿನ ಪ್ರಧಾನ ಲಕ್ಷಣವೊಂದೆಂದರೆ ಅರ್ಥಗೋಪನ ಕ್ರಿಯೆ ವಾಸ್ತವ ಅರ್ಥವನ್ನು ಮುಚ್ಚಿಡುವ ರೀತಿಯೇ ಇದು. [೨]

[೩] ರೂಪಕ ಮತ್ತು ಸಾಂಕೇತಿಕತೆ ಒಗಟಿನ ದೊಡ್ಡ ಲಕ್ಷಣ [೩]

[೪] ಒಗಟು ಪದ್ಯರೂಪದಲ್ಲಿರುತ್ತವೆ: ಇಲ್ಲವೆ, ಹೇಳಿಕೆಗಳ ರೂಪದಲ್ಲಿರುತ್ತವೆ. ಒಗಟು ಸಂಕ್ಷಿಪ್ತ ರೂಪದ ಒಂದು ಆಕರ್ಷಕ ರಚನೆ ಅದರಲ್ಲೂ ಜನಪ್ರಿಯ ಒಗಟುಗಳು ತುಂಬ ಚಿಕ್ಕದು, ಬಹುತೇಕ ಕಾವ್ಯಾತ್ಮಕವಾದವು.[೪]

[೫] ಒಗಟುಗಳು ದ್ವಿಪದಿ, ತ್ರಿಪದಿ, ಚತುಷ್ಪದಿ, ಷಟ್ಪದಿ ಎಲ್ಲದರಲ್ಲೂ ರಚಿತವಾಗಿರುವ ಸಂಭವವಿದೆ. [೫]

[೬] ಒಗಟ್ಟಿನಲ್ಲಿ ಬುದ್ಧಿಯ ಕಸರತ್ತೇ ಪ್ರಧಾನ ಹಾಗೆಂದರೆ ಭಾವಕ್ಕೆ ಬೆಲೆಯಿಲ್ಲವೆಂದಲ್ಲ. ಒಗಟು ರಂಜನೆಯ ಸಾಧನವಾಗಿರುವಂತೆ ಚಿಂತನದ ಫಲವೂ ಆಗಿದೆ. ಸಾಮಾಜಿಕ ಸಂಪ್ರದಾಯವಾಗಿಯೂ ಸ್ಥಾನ ಪಡೆದಿದೆ. [೬]

ಹೀಗೆ ಪುಟ್ಟ ಪುಟ್ಟ ವಾಕ್ಯಗಳನ್ನು ಬಳಸಿ ಒಗಟಿನ ಮಹತ್ವ ಹಾಗೂ ಲಕ್ಷಣವನ್ನು ತಿಳಿಸಿದ್ದಾರೆ.

'ಕನ್ನಡ ಶಿಶು ಪ್ರಾಸಗಳು' ಕೃತಿಗೆ ಜಾನಪದ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ಜನಪದ ಸಂಸ್ಕೃತಿಯ ಪ್ರತಿಬಿಂಬಿಸುವ ಬಹುಮುಖವಾದ ಕೃತಿಯಾಗಿದೆ. ಜನಪದರ ಪ್ರತಿಭೆಯ ಬೇರುಗಳು ಇಲ್ಲಿ ಕಾಣ ಸಿಗುತ್ತದೆ. ಜಾನಪದ ಮೌಖಿಕ ಸಾಮಗ್ರಿಯನ್ನು ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸುವುದನ್ನು ಪ್ರಧಾನ ಕಾಳಜಿಯನ್ನಾಗಿಸಿಕೊಂಡ ನಮ್ಮ ಬಹುತೇಕ ಜಾನಪದ ವಿದ್ವಾಂಸರು ಹಾಗೂ ಸಂಪಾದನಾಕಾರರು ಜನಪದ ಶಿಶು ಪ್ರಾಸಗಳನ್ನು ಸಂಗ್ರಹಿಸುವ ಹಾಗೂ ಪರಿಶೀಲಿಸುವ ಕಾರ್ಯದ ಕಡೆಗೆ ಆರಂಭದಲ್ಲಿ ಅಷ್ಟಾಗಿ ಗಮನ ಕೊಡಲಿಲ್ಲ. ಪ್ರತಿಯೊಂದು ಸಂಗತಿಯನ್ನು ತನ್ನ ಪರಿಭಾವನೆಗೆ ತೆಗೆದುಕೊಂಡು ಸೃಜನಶೀಲ ಪ್ರಕ್ರಿಯೆಗೆ ಒಳಪಡಿಸುವ ಜನಪದ ಪ್ರತಿಭೆ ಮಕ್ಕಳ ಮನರಂಜನೆಗಾಗಿ ಶಿಶು ಪ್ರಾಸಗಳನ್ನು ಸೃಜಿಸಿದೆ.

ಒನೂರಮೂವತ್ತೆರೆಡು ಶಿಶು ಪ್ರಾಸಗಳು ಸಂಕಲಿತವಾಗಿರುವ ಕೃತಿ ಪ್ರೌಢವಾದ ಪ್ರಸ್ತಾವನೆಯನ್ನು ಅಗತ್ಯವಾದ ಟಿಪ್ಪಣಿಗಳು ಹಾಗೂ ಅರ್ಥಕೋಶವನ್ನು ಒಳಗೊಂಡಿದೆ. ಟಿಪ್ಪಣಿಯಲ್ಲಿ ಶಿಶುಪ್ರಾಸಗಳು ಬಳಕೆಯಾಗುವ ಸಾಂದರ್ಭಿಕ ಹಿನ್ನೆಲೆ ಹಾಗೂ ಅವುಗಳನ್ನು ಹಾಡುವಾಗಿನ ಮಕ್ಕಳ ಅಂಗಿಕ ಚಲನವಲನಗಳನ್ನು ವಿವರಿಸಲಾಗಿದೆ. ಸಂಗ್ರಹಿತ

ಶಿಶುಪ್ರಾಸಗಳನ್ನು ಸರಿಯಾಗಿ ಅರ್ಥೈಸಿಕೊಳ್ಳಲು ಮತ್ತು ಸಂಬಂಧಿಸಿದ ಸಾಂದರ್ಭಿಕ ಸಾಂಸ್ಕೃತಿಕ ಸನ್ನಿವೇಶಗಳನ್ನು ಪುನರ್ರೂಪಿಸಲು ಈ ಟಿಪ್ಪಣಿಗಳು ಸಹಕಾರಿ ಹಾಗೂ ಮಾರ್ಗದರ್ಶಕ. ರಾಗೌ ತಮ್ಮ ಸಂಶೋಧನಾ ಶಿಸ್ತು ,ಗಾಂಭೀರ್ಯ ತೌಲನಿಕ ದೃಷ್ಟಿಯಿಂದ ಮತ್ತು ವಿದ್ವತ್ತನ್ನು ಮೆರೆದಿದ್ದಾರೆ. ಜನಪದ ಶಿಶು ಪ್ರಾಸಗಳನ್ನು ಕುರಿತ ಗಂಭೀರವೂ ವ್ಯಾಪಕವೂ ಆದ ವಿಚಾರಗಳು ಇಲ್ಲಿ ಮೊದಲಿಗೆ ಪ್ರಕಟಗೊಂಡಿದೆ. ೭

ಎಂಟು ಜನಪದ ಕಥನ ಗೀತೆಗಳ ಸಂಕಲನವೇ 'ಚಾಮಾಯಿ'. ಈ ಕಥನ ಗೀತೆಗಳನ್ನು ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಎಂದು ವಸ್ತು ಮತ್ತು ದೃಷ್ಟಿಯಿಂದ ವಿಂಗಡಿಸಿ ಕೊಳ್ಳಬಹುದು. ಕೆಂಪಮ್ಮ, ಕುಸುಮಾಲೆ,ಉತ್ತರದೇವಿ, ಕಾಳಮ್ಮ, ಬೇಡನ ಬಾಲೆ, ಮಲ್ಲಮ್ಮ-ಗಿರಿಜೆ, ನಂಜುಂಡ- ಚಾಮಾಯಿ, ಗಂಗೆ ಗೌರಿ ಜಗಳ- ಇವು ಇಲ್ಲಿ ಸಂಕಲನಗೊಂಡಿರುವ ಕಥನ ನೀತಿಗಳು.

ಮೂವತ್ತಾರು ಬಗೆಯ ಆಟವನ್ನು ವಿವರಿಸುವ ಕೃತಿ 'ಜನಪದ ಆಟಗಳು'. ಈ ಕೃತಿಯು ಮಕ್ಕಳ ದೃಷ್ಟಿಯಿಂದಲ್ಲೇ ರಚನೆಗೊಂಡಿದರು ಎಲ್ಲಿ ವಯೋಮಾನದವರೂ, ಎಲ್ಲ ಬಗೆಯ ಜನರೂ ಆಡುವ ಆಟಗಳ ವಿವರಣೆ ಇಲ್ಲಿ ಲಭ್ಯವಾಗಿದೆ. ಆಟ ಎಂದರೇನು? ಆಟಗಳ ಬದಲಾವಣೆ ಕ್ರಿಯೆ, ಅವುಗಳ ಕಾರಣ ಸ್ವರೂಪ, ವರ್ಗೀಕರಣ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಮಹತ್ವ, ಆಟಗಳಿಂದುಂಟಾಗುವ ಜನಾಂಗೀಯ ಸಮಪರ್ಕ ಇತ್ಯಾದಿ ವಿಷಯಗಳ ವ್ಯಾಪಕ ವಿವೇಚನೆ ಈ ಕೃತಿಯಲ್ಲಿದೆ. ಕೃತಿ ಚಿಕ್ಕದಾದರು ವಿಷಯ ವ್ಯಾಪಕತೆ,ಸೂಕ್ಷ್ಮ ದೃಷ್ಟಿಯಿಂದ ಪರಿಪೂರ್ಣತೆಯನ್ನು ಪಡೆದುಕೊಂಡಿದೆ.

'ಜನಪದ ನಂಬಿಕೆಗಳು', ಕೃತಿಯನ್ನು ರಾಗೌ ಅವರು ಎಂ.ಸಿ.ವಸಂತಕುಮಾರ್ ಅವರೊಡನೆ ಸಂಗ್ರಹಿಸಿದ್ದು. ಒಂದು ವಿಶಿಷ್ಟ ರೀತಿಯ ಗ್ರಂಥ. ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಅವರ ನಂಬಿಕೆಗಳನ್ನು ಬಿಡಿಸಿ ಹೊರ ತೆಗೆಯುವ ಪ್ರಯತ್ನ ಈ

ಕೃತಿಯಲ್ಲಿ ಮಾಡಲಾಗಿದೆ. ಪ್ರತಿಯೊಂದು ಅಂಶವನ್ನು ಬಿಡಿ ಬಿಡಿಯಾಗಿ ವಿಶ್ಲೇಷಿಸುವ ಕಾರ್ಯ ಇದರಲ್ಲಿ ನಡೆದಿದೆ. ಐದುನೂರು ಐವತ್ತು ನಂಬಿಕೆಗಳನ್ನು ಸಂಗ್ರಹಿಸಿ ಅಕಾರಾದಿಯಾಗಿ ಸಂಕಲನಗೊಳಿಸಲಾಗಿದೆ. ಕೊನೆಯ ಟಿಪ್ಪಣಿ, ಅರ್ಥ ವಿವರಣೆಯನ್ನು ನೀಡಲಾಗಿದೆ. ಪ್ರಾರಂಭದ ಪ್ರಸ್ತಾವನೆಯಲ್ಲಿ ನಂಬಿಕೆಯ ಸ್ವರೂಪ, ವೈವಿಧ್ಯ ಹಾಗೂ ಪರಿಣಾಮಗಳ ವಿವೇಚನೆಯನ್ನು ಮಾಡಲಾಗಿದೆ. ಜನಪದರಿಂದ ರೂಪುಗೊಂಡ ನಂಬಿಕೆಗಳು ಅವರ ಬದುಕನ್ನೇ ನಿಯಂತ್ರಿಸುವ ಶಕ್ತಿಗಳಾಗಿ ಪರಿಣಮಿಸುವ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಒಟ್ಟಿನಲ್ಲಿ ಜನಪದರ ನಂಬಿಕೆಗಳಲ್ಲಿ ಧನಾತ್ಮಕ ಹಾಗೂ ಋಣಾತ್ಮಕ ಎರಡು ಅಂಶಗಳು ಅಭಿವ್ಯಕ್ತವಾಗಿದೆ.

'ಜನಪದ ರಾಮಾಯಣ' ಎಸ್. ಬಸಯ್ಯ, ಪಿ.ಕೆ.ರಾಜಶೇಖರ ಅವರೊಡಗೂಡಿ ಸಂಗ್ರಹಿಸಿದ ಕೃತಿ. ವಿವಿಧ ಸಂಪ್ರದಾಯಕ್ಕೆ ಸೇರಿದ ರಾಮಾಯಣ ಕಥೆಗಳು ಸಂಗ್ರಹವಾಗಿದೆ. ಇದರಲ್ಲಿ ನಾಲ್ಕು ಭಾಗಗಳಿವೆ. ಮೊದಲನೆಯದರಲ್ಲಿ ಸೀತೆಯ ಹುಟ್ಟು, ಸ್ವಯಂವರ ಪರೀಕ್ಷೆಗೆ ಸಂಬಂಧಿಸಿದ ಕಥೆ ನಿರೂಪಿತವಾಗಿದೆ. ಎರಡನೆಯ ಭಾಗದಲ್ಲಿ ಶಂಬೂಕನ ಪ್ರಸಂಗವಿದೆ. ಮೂರನೆಯ ಭಾಗದಲ್ಲಿ ಲವಕುಶರ ಕಾಳಗ ಕಂಸಾಳೆ ಸಂಪ್ರದಾಯದವರು ಹಾಡಿದುದು. ನಾಲ್ಕನೆಯ ಭಾಗದಲ್ಲಿ 'ಸಂಪೂರ್ಣ ರಾಮಾಯಣ' ವಿದೆ. ಇದು ತಂಬೂರಿ ಸಂಪ್ರದಾಯದ ವೃತ್ತಿ ಗಾಯಕರು ಹಾಡಿದ್ದಾರೆ. ಮೈಸೂರು, ಕೊಡಗು, ಚಿಕ್ಕಮಗಳೂರು ಜಿಲ್ಲೆಗಳಿಗೆ ಸೇರಿದ ಗಾಯಕರಿಂದ ಇಲ್ಲಿನ ಕಥಾ ಭಾಗಗಳನ್ನು ಸಂಗ್ರಹಿಸಲಾಗಿದೆ. ರಾಗೌ ಪ್ರಸ್ತಾವನೆಯಲ್ಲಿ ಶಿಷ್ಟ ಹಾಗೂ ಜನಪದ ಸಂಪ್ರದಾಯದ ರಾಮಾಯಣಗಳ ಕಥಾ ಸ್ವರೂಪವನ್ನೂ ವಿವೇಚಿಸಿದ್ದಾರೆ.

"'ಜನಪದ ಸಾಹಿತ್ಯ ರೂಪಗಳು' ಕೃತಿಯಲ್ಲಿ ಗೀತೆ, ಲಾವಣಿ, ಕಥೆ, ಒಗಟು– ಇವುಗಳನ್ನು ತಾತ್ವಿಕ ಚರ್ಚೆಗೆ ಎತ್ತಿಕೊಂಡಿದೆ. ಸಾಹಿತ್ಯದ ಸ್ವರೂಪ, ಲಕ್ಷಣ, ವರ್ಗೀಕರಣಗಳ

ವಿಶ್ಲೇಷಣೆ ಇಲ್ಲಿ ಕಂಡುಬರುತ್ತದೆ. ತರ್ಕಬದ್ಧತೆ, ಕ್ರಮಬದ್ಧತೆ, ನಿಖರತೆ ಮತ್ತು ಶಾಸ್ತ್ರೀಯತೆಯ ಗುಣಗಳಿಂದ ಕೂಡಿದ ಇಲ್ಲಿನ ಪ್ರಬಂಧಗಳು ತುಂಬಾ ಉಪಯುಕ್ತವೆನಿಸಿದೆ. ಈ ಪ್ರಕಾರಗಳ ತಾತ್ವಿಕ ಚರ್ಚೆ ಇಲ್ಲಿ ಪ್ರಥಮ ಉಪಯುಕ್ತವೆನಿಸಿವೆ. ಈ ಪ್ರಕಾರಗಳ ತಾತ್ವಿಕ ಚರ್ಚೆ ಪ್ರಥಮ ಬಾರಿಗೆ ಅಧಿಕೃತವಾಗಿ ಕಾಣಿಸಿಕೊಡಿರುವುದು ಈ ಕೃತಿಯ ಚಾರಿತ್ರಿಕ ಮಹತ್ವಕ್ಕೆ ಕಾರಣವಾಗಿದೆ. ಪಾರಿಭಾಷಿಕ ಪದಸೂಚಿ ಹಾಗೂ ಶಬ್ದಸೂಚಿಗಳಿಂದ ತನ್ನ ಶಾಸ್ತ್ರಿಯ ಘನತೆಯನ್ನು ಹೆಚ್ಚಿಸಿಕೊಂಡಿರುವ ಈ ಗ್ರಂಥ ಜಾನಪದದ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಪ್ರಯೋಜನಕಾರಿಯಾದ ಉಪಾಧೇಯ ಕೃತಿಯಾಗಿದೆ. [೮]

'ಜನಪದ ಸಾಹಿತ್ಯ ರೂಪಗಳು' ಈ ಕೃತಿಯ ಯೂವುದೇ ಅಧ್ಯಾಯಗಳನ್ನು ತೆಗೆದುಕೊಂಡರೂ ವಿದ್ವತ್ ಪ್ರೌಢಿಮೆಯ ದರ್ಶನವಾಗುತ್ತದೆ. ವಿಷಯ ನಿರೂಪಣೆಯಲ್ಲಿ ಪ್ರಾಮಾಣಿಕ ನಿರ್ಲಿಪ್ತತೆ ಕಂಡುಬರುತ್ತದೆ. ನಿರ್ಲಿಪ್ತತೆ ಸಿದ್ಧಿಗೆ ಬೇರು ಎಂಬ ಮಾತೊಂದಿದೆ. ಈ ಮಾತು ಸತ್ಯವಾಗಿದ್ದರೆ, ತಮ್ಮ ನಿಟ್ಟಿನಲ್ಲಿ ಉದ್ದೇಶದಲ್ಲಿ ಲೇಖಕರು ಸಿದ್ಧಿಯನ್ನು ಗಳಿಸಿಕೊಂಡಿದ್ದಾರೆ ಎಂಬ ಮಾತು ನಿರ್ವಿವಾದವಾಗುತ್ತದೆ. ಆದ್ದರಿಂದ ಈ ಗ್ರಂಥ ಅಭ್ಯಾಸಿಗಳಿಗೆ ಮಾತ್ರವಲ್ಲ ಕನ್ನಡ ಜಾನಪದಕ್ಕೆ ಒಂದು ಅನಿವಾರ್ಯವಾಗಿ ನಿಲ್ಲಬಲ್ಲುದು. "ಅನಕ್ಷರಸ್ಥ ಜನಸಮೂಹದ ನಡುವೆ ವಾಕ್ಸಂಪ್ರದಾಯದ ಮೂಲಕ ಹರಿದು ಬಂದಿರುವ ಒಂದು ಗುಂಪಿನ ಕಾವ್ಯ ಮತ್ತು ಸಂಗೀತಗಳ ಸಮಾವೇಶದಿಂದಾದುದು ಜನಪದಗೀತೆ" ಎಂಬುದು ಪ್ರಾರಂಭವಾಗುವ ಮೊದಲ ಅಧ್ಯಾಯನದ ಮಾತುಗಳೇ ಬಹುಶಃ ಜನಪದ ಗೀತ ಸಾಹಿತ್ಯದ ತಿರುಳು ಎಂದು ಹೇಳಬಹುದು.

ಜನಪದ ಗೀತೆ ನಾಗರೀಕ ಮನಸ್ಸಿನ ಅಭಿವ್ಯಕ್ತಿಯಲ್ಲ. ಗ್ರಾಮೀಣರ ಸುಖ ದುಃಖಗಳನ್ನು ಸಮಸ್ಯೆ ಕ್ಲೇಶಗಳನ್ನು ಹೇಳುವಂಥದ್ದು ಯಾಕೆಂದರೆ ಇವು ಹುಟ್ಟಿದ್ದು ಗ್ರಾಮೀಣ ಪರಿಸರದಲ್ಲಿ ಯಾವುದೇ ಬಗೆಯ ಅಭಿವ್ಯಕ್ತಿಯಾಗಲಿ ಪ್ರಾಮಾಣಿಕವಾಗಿ ಹೇಳುವಾಗ ತನ್ನ ಹುಟ್ಟಿನ ಹಾಗೂ ಬೆಳವಣಿಗೆಯ ಪರಿಸರದ ದಟ್ಟ ಪ್ರಭಾವವನ್ನು ಹೊಂದಿರುತ್ತದೆ. ಅಭಿವ್ಯಕ್ತಿ

ಸಾಂದರ್ಭಿಕವಾಗಿದ್ದಾಗ ಸಮಯೋಚಿತವಾಗಿದ್ದಾಗ ಅನಿವಾರ್ಯವಾಗಿದ್ದಾಗ ಮಾತ್ರ ಈ ಮಾತು ಅನ್ವಯಿಸುತ್ತದೆ. ಉದ್ದೇಶಿತ ಅಭಿವ್ಯಕ್ತಿಯಲ್ಲಿ ಪರಿಸರದ ಪ್ರಭಾವ ಲವಲೇಶವೂ ಇರುವುದಿಲ್ಲವೆಂದು ಹೇಳಲಾಗದಿದ್ದರೂ ಉದ್ದೇಶಕ್ಕೆ ತಕ್ಕ ಕೃತಕ ಸಮರ್ಥನೆ ಅಲ್ಲಿ ಹೆಚ್ಚು ಪ್ರಭಾವಿತವಾಗಿರುತ್ತದೆ. ಆದ್ದರಿಂದ ಹುಟ್ಟಿಗೆ ಕಾರಣವಾಗುವ ಪರಿಸರದ ಪ್ರಭಾವ ಜಾನಪದದಲ್ಲಿ ಅತ್ಯಂತ ಪ್ರಮುಖವೆಂದು ಪರಿಗಣಿತವಾಗುವುದು ಅನಿವಾರ್ಯವಾಗುತ್ತದೆ.

ಪ್ರಣಯ ಪ್ರಧಾನ ಗೀತೆಗಳಲ್ಲಿ ಡೋಲು, ನಗಾರಿ, ಕಹಳೆ, ಕೊಳಲು ಮುಂತಾದ ವಾದ್ಯಗಳ ಮೂಲಕ ಸಂಗೀತವು ಪ್ರಧಾನ ಪಾತ್ರವಹಿಸುವುದುನ್ನು ಪ್ರಣಯದ ಉದ್ದೇಶದಿಂದ ಸಂದರ್ಶಿಸುವ ಕೆಲವು ಪ್ರದೇಶಗಳನ್ನೂ ಹಾಡಿನಷ್ಟೇ ಅಥವಾ ಹಾಡಿನ ಸಂದರ್ಭದಷ್ಟೇ ಸಹಜ ಸುಂದರವಾಗಿಯೂ ಸಾಂಕೇತಿಕವಾಗಿಯೂ ಅರ್ಥಪೂರ್ಣವಾಗಿಯೂ ಲೇಖಕರು ವಿವರಿಸುವ ರೀತಿ ಆಕರ್ಷಕವಾಗಿದೆ. ಮದುವೆ ಸಂದರ್ಭಗಳಲ್ಲಿ ಹಾಡಲಾಗುವ ಹಾಡುಗಳ ಹಿನ್ನೆಲೆಯಲ್ಲಿ ಅಡಗಿರುವ ಎರಡು ಯುವ ಚೇತನಗಳು ಒಂದಾಗುವಲ್ಲಿನ ಸಂವೇದನೆಯನ್ನು ಗುರುತಿಸುವುದೂ, ಹಾಗೂ ಆ ಸಂವೇದನೆ ಸಂಬಂಧ ಪಟ್ಟ ಚೇತನಗಳ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಎಂಥೆಂಥ ತಿರುವು ಪಡೆದು ಕೊಳ್ಳಬಲ್ಲವಾಗಿವೆಯೆಂಬುದನ್ನೂ ಲೇಖಕರು ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಲಾವಣಿಯ ಬಗ್ಗೆ ಇರುವ ಗೊಂದಲವನ್ನು ಸೂಕ್ಷ್ಮವಾಗಿ ಎಳೆಎಳೆಯಾಗಿ ನಿರ್ಮಲಗೊಳಿಸುವ ಪ್ರಾಮಾಣಿಕ ಪ್ರಯತ್ನವನ್ನೂ ಕಾಣುತ್ತೇವೆ.

ಜನಪದ ಕಥೆಗಳನ್ನು ಕುರಿತಂತೆ ರಾಗೌ ಅವರು ತಮ್ಮದೇ ಆದ ವಿದ್ವತ್ ಮೌಲ್ಯಗಳಿಂದ ತಾತ್ತ್ವಿಕವಾಗಿ ಚರ್ಚಿಸುತ್ತ ಹೋಗುತ್ತಾರೆ. ಕಥೆಗಳಲ್ಲಿ ಬರುವ ಪಾತ್ರಗಳು, ಆ ಪಾತ್ರಗಳ ಲಕ್ಷಣ ಕಥಾವರ್ಗಗಳು, ಗುಣ ಮೌಲ್ಯಗಳು, ಉದ್ದೇಶಗಳು, ಪಾಶ್ಚಾತ್ಯ ವಿದ್ವಾಂಸರ ಹೇಳಿಕೆಗಳ ಬಗ್ಗೆ ಜಿಜ್ಞಾಸೆಗಳು, ಉಗಮ ವಿಕಾಸಗಳು ಬಗೆ ಬಗೆಯ ಸಿದ್ಧಾಂತಗಳು ವಿಧಾನಗಳು ಇತ್ಯಾದಿಯಾಗಿ ಯಾವೊಂದು ಸೂಕ್ಷ್ಮಾತಿಸೂಕ್ಷ್ಮ ಅಂಶವನ್ನು ಕಡೆಗಣಿಸದೆ

ಪರಿಪೂರ್ಣ ಚರ್ಚೆಯಲ್ಲಿ ಯಶಸ್ವಿಯಾಗಿದ್ದರೂ ಕೂಡ " ಜನಪದ ಕಥೆಯ ಮೂಲ ರೂಪವನ್ನು ಕುರಿತಂತೆ ಇಷ್ಟೆಲ್ಲ ವಿಚಾರ ನಡೆದಿದ್ದರೂ ಅದನ್ನು ಸಂಪೂರ್ಣವಾಗಿ ಅರ್ಥೈಸಲು ಇನ್ನೂ ಸಾಧ್ಯವಿಲ್ಲವಾಗಿದೆ. ಮುಂದೆ ಕ್ರಮಿಸಬೇಕಾದ ದಾರಿ ಬಹಳವಿದೆ ಎಂಬುದನ್ನು ಈ ಸಂದರ್ಭದಲ್ಲಿ ಮರೆಯಬಾರದು" ಎಂಬುದಾಗಿ ಅಧ್ಯಾಯವನ್ನು ಮುಕ್ತಾಯಗೊಳಿಸಿರುವುದು ಪ್ರಾಮಾಣಿಕ ಸಂಶೋಧನೆಗೆ ಪ್ರಾಮಾಣಿಕ ವಿದ್ವತ್ತಿಗೆ ಮಾತ್ರ ಸಾಟಿಯಾಗಬಲ್ಲ ವಿಧಾನವಾಗಿದೆ.

ಗಾದೆಗಳ ಬಗ್ಗೆ ಹೇಳುವುದಾದರೆ ವಿಶ್ವದ ಯಾವ ಮೂಲೆಯ ಯಾವ ಭಾಷೆಯ ಗಾದೆಯನ್ನು ತೆಗೆದುಕೊಂಡರೂ ಇತರ ಯಾವುದೇ ಭಾಷೆಗಳ ಗಾದೆಗಳೊಂದಿಗೆ ಹೋಲಿಸುವಾಗ ಸಮಾನ ಗುಣ ಪ್ರವೃತ್ತಿಯನ್ನೂ ಸಮಾನ ಮನೋಧರ್ಮವನ್ನು ಬಹಳಷ್ಟು ಉದಾಹರಣೆಗಳಲ್ಲಿ ಕಾಣಬಹುದಾಗಿದೆ. ಹೀಗೆ ಸಮಾನತೆ ಕಂಡು ಬಂದಾಗ ಅಂಥ ಹಿನ್ನೆಲೆಯಲ್ಲಿ ಸಮಾನ ಆಲೋಚನೆಯೊಂದರ ಸಮರ್ಥ ಪ್ರಭಾವವಿರುವುದು ಸಹಜವೆನ್ನಿಸಿಬಿಡುತ್ತದೆ. ಡಾ॥ ರಾಗೌ ಅವರ ಯಾವ ಅಧ್ಯಾಯದಲ್ಲೂ ಇಂಥ ನವಿರಾದ ಅಸಹಜವೆನ್ನಿಸದ ವಿಶ್ಲೇಷಣೆಗಳನ್ನು ಕಾಣುತ್ತೇವೆ.

ಆದಿವಾಸಿ ಕಂಡುಕೊಂಡ ಅಭಿವ್ಯಕ್ತಿಯ ಹಲವು ಪ್ರಕಾರಗಳಲ್ಲಿ ಒಗಟೂ ಒಂದು. ಮೂಲಭೂತವಾಗಿ ಸೃಷ್ಟಿಯೇ ಒಂದು ಪ್ರಶ್ನೆ. ಜೀವನವೇ ಒಂದು ಅರ್ಥವತ್ತಾದ ಸಮಸ್ಯೆ ಎಂಬ ಸಾಂಕೇತಿಕ ದೃಷ್ಟಿಯ ಹಿನ್ನೆಲೆ ಒಗಟು ರಚಿತವಾಗಿರುವಂತೆ ತೋರುತ್ತದೆ. ಜೀವನವೇ ಅದರ ಪರಿಕರ ಆದರೆ ಜೀವನದಷ್ಟೇ ಅದು ಗೂಢತರ ಜಗತ್ತಿನ ಎಲ್ಲ ಕಡೆಗಳಲ್ಲೂ ಸಾರ್ವತ್ರಿಕವಾಗಿ ಹರಡಿ ಕೊಂಡಿರುವ ಇದು ಜನಾಂಗವೊಂದರ ಭಾಷೆ, ಸಂಸ್ಕೃತಿ ಹಾಗೂ ಸಾಹಿತ್ಯಗಳ ಮುಪ್ಪುರಿಯಾಗಿದೆ. ಜನತೆಯ ಬುದ್ಧಿ ವೈಭವ, ಹಾಸ್ಯಪ್ರಿಯತೆ, ಚತುರೋಕ್ತಿ, ವಿಡಂಬನ ಸ್ವಭಾವ, ಬೋಧನ ಮನೋಧರ್ಮ ಇವನ್ನು ಚಿತ್ರಿಸಲು ಯತ್ನಿಸುತ್ತದೆ ಒಗಟು. ಒಗಟಿನ ಪ್ರಧಾನವಾದ ಲಕ್ಷಣಗಳೆಂದರೆ ಅರ್ಥಗೋಪನ ಕ್ರಿಯೆ, ರೂಪಕ,

ಸಾಂಕೇತಿಕತೆ ಮತ್ತು ಸ್ವಲ್ಪ ಮಟ್ಟಿಗೆ ಅಸ್ಪಷ್ಟತೆ ಒಗಟು ರಂಜನೆಯ ಸಾಧನವಾಗಿರುವಂತೆ ಚಿಂತನದ ಫಲವೂ ಆಗಿದೆ. ಸಾಮಾಜಿಕ ಸಂಪ್ರದಾಯವಾಗಿಯೂ ಸ್ಥಾನ ಪಡೆದಿದೆ. ಜನರ ನಂಬಿಕೆ ಮತ್ತು ವಿವೇಕವನ್ನು ಚಿರಸ್ಥಾಯಿಯಾಗಿ ಮಾಡಿರುವ ಜನಪ್ರಿಯ ಪ್ರಕಾರ ಇದು. ಶೈಕ್ಷಣಿಕ ಹಾಗೂ ಮನೋರಂಜಕ ಲಕ್ಷ್ಯಗಳೆರಡನ್ನೂ ಹೊಂದಿರುವಂಥದು.

ಮತಪ್ರಕ್ರಿಯೆ, ಜನಪದ ಒಗಟು, ಸಾಹಿತ್ಯಿಕ ಒಗಟು, ಚಿತ್ರಶಬ್ದದ ಒಗಟು, ಸ್ಪರ್ಧಾತ್ಮಕ ಒಗಟು, ಒಗಟು ಕಥೆ, ಯಕ್ಷ ಪ್ರಶ್ನೆ, ಪದ್ಯ ರೂಪದ ಕಥನ ಒಗಟು,ಸಾವನ್ನು ಕುರಿತ ಒಗಟು, ವೈನೋದಿಕ ಒಗಟು, ಪ್ರಶ್ನೆರಹಿತ ಒಗಟು, ನಿಷಿದ್ಧತೆ, ಬೆಡಗಿನ ವಚನ, ಮುಡಿಗೆಯ ಅಷ್ಟಕ ಇತ್ಯಾದಿ ಯಾವುದೇ ಬಗೆಯನ್ನು ಯಾವುದೇ ರೂಪವನ್ನು ತೆಗೆದುಕೊಂಡರೂ ಈ ಅಧ್ಯಾಯದಲ್ಲಿ ಸೂಕ್ತ ವಿವರಣೆಗಳೂ ಚರ್ಚೆಗಳೂ ಹೋಲಿಕೆಗಳೂ ಎಲ್ಲಕ್ಕಿಂತ ಹೆಚ್ಚಾಗಿ ವಿಷಯವನ್ನು ಮಂಡಿಸುವ ವಿಶಿಷ್ಟ ನಿರ್ಲಿಪ್ತತೆಯೂ ಆಸಕ್ತರನ್ನು ತೃಪ್ತಿಪಡಿಸುತ್ತದೆ. ಒಗಟಿನ ಸ್ಪರ್ಧೆ ಕೆಲವು ಸಲ ಸಾವು ಬದುಕಿನ ಸೆಣಸಾಟವಾಗುತ್ತಿದ್ದ ಪ್ರಸಂಗಗಳನ್ನೂ ಇಲ್ಲಿ ಕಾಣಬಹುದು. ಯಾವುದೇ ಪುಟವನ್ನು ತಿರುವಿದರೂ ಅಲ್ಲಿ ವಿದ್ವದ್ದರ್ಶನವಾಗುವಿಕೆ ಈ ಗ್ರಂಥದ ಒಂದು ಪ್ರಮುಖ ಲಕ್ಷಣ. ಯಾವುದೇ ಪ್ರಕಾರವನ್ನು ತೆಗೆದುಕೊಂಡರೂ ಅದರ ಉಗಮ, ವಿಕಾಸ, ಇತರ ಭಾಷೆಗಳಲ್ಲಿ ಅವುಗಳ ರೂಪವೇನು ಗುಣವೇನು, ಕನ್ನಡದಲ್ಲಿ ಅದರ ಸ್ಥಾನವೇನು, ಇತರ ಭಾಷೆಗಳಲ್ಲಿ ಅದರ ಸ್ಥಾನವೇನು ಯಾವ ಯಾವ ವಿದ್ವಾಂಸರು ಏನೇನನ್ನು ಕುರಿತು ಹೇಗೆ ವಿಶ್ಲೇಷಿಸಿದ್ದಾರೆ. ಅದರ ವಿಶ್ಲೇಷಣೆಗಳ ಗುಣಾವಗುಣಗಳೇನು– ಹೀಗೆ ವಿದ್ವತ್ಪೂರ್ಣವಾಗಿ ಚರ್ಚಿಸುತ್ತ ಅಲ್ಲಲ್ಲಿ ಸೂಕ್ತ ತೀರ್ಮಾನಗಳನ್ನು ಮೆರೆಯುತ್ತ, ಸಾಗುವ ಇಲ್ಲಿನ ಅಧ್ಯಯನ ಮಹತ್ವದ್ದೆನಿಸುತ್ತದೆ. ವಿದ್ವಜ್ಜನರಿಗೆ ಕೌತುಕಕಾರಿಯೂ ಆಗಬಲ್ಲುದೆನಿಸುತ್ತದೆ.

ಗ್ರಂಥದ ಉದ್ದಕ್ಕೂ ಲೇಖಕರ ಜಾನಪದದ ಬಗೆಗಿನ ಕಳಕಳಿ ಅಲ್ಲಲ್ಲಿ ಮಿಂಚುತ್ತದೆ. "ಜನಪದರು ಬಡತನದಲ್ಲಿ ಅದ್ದಿ ಹೋದವರು ಆದರೆ ಅವರ ಗೀತೆಗಳಲ್ಲಿ ಈ ಯಾವುದೇ ಕಹಿ ಕಂಡು ಬರುವುದಿಲ್ಲ" ನಾಗರಿಕತೆ ಧಾಳಿಯಿಂದ ಇದೆಲ್ಲ ಹಾಳಾಗುತ್ತಿರುವುದು ಅಪಾರ ನಷ್ಟವೇ ಸರಿ ನಾವೀಗ ಯಂತ್ರಯುಗದಲ್ಲಿ ಯಾಂತ್ರಿಕವಾಗಿ ನೀರಸ ಬದುಕನ್ನು ಬದುಕುತ್ತಿದ್ದೇವೆ" ಇತ್ಯಾದಿಯಾಗಿ ಡಾ.ರಾಗೌ ಅವರ ಹೃದಯಾಂತರಾಳದಿಂದ ಹೊರಟ ಮಾತುಗಳು ಆಸಕ್ತರ ಸಹಾನುಭೂತಿಯನ್ನೂ ಮೆಚ್ಚುಗೆಯನ್ನೂಗಳಿಸಿಕೊಳ್ಳುತ್ತದೆ. ಜನಪದ ಪರಿಸರವೇ ರಕ್ತಗತವಾಗಿ ಬಂದಿರುವ ಹೃದಯದಿಂದ ಮಾತ್ರ ಇಂಥ ಮಾತುಗಳು ಹೊಮ್ಮಲು ಸಾಧ್ಯ.

ಈ ಕೃತಿಯಲ್ಲಿ ಬಳಸಿರುವ ಗದ್ಯ ಶೈಲಿ ಅತ್ಯಂತ ಸರಳವಾಗಿದೆ. ಓದುಗರು ಸುಲಭವಾಗಿ ಗ್ರಹಿಸಲು ಸಾಧ್ಯವಾಗಿದೆ. ನಿದರ್ಶನಕ್ಕೆ ಈ ಕೆಳಗಿನ ಸಾಲುಗಳನ್ನು ಗಮನಿಸಬಹುದು.

‘ಲಾವಣಿಯ ರಚನೆ, ಭಾಷೆಯ ರಚನೆಯ ಹಾಗೆ ಸ್ಥಿರವಾದುದಲ್ಲ. ಸರಳ ನಾಟಕೀಯ ರೂಪದಿಂದ ಮಹಾಕಾವ್ಯ ವಿಕಾಸವಾದುದನ್ನು ತೋರಿಸುತ್ತದೆ. ಮೂಲ ಲಾವಣಿಯನ್ನು ರೂಪಿಸಿರುವಂಥದು ವೇಳೆ, ನಾಟಕೀಯ ಪ್ರಕ್ರಿಯೆ ಮತ್ತು ಸನ್ನಿವೇಶ ನಿರೂಪಣೆ’

೧೦ ಮಾನವನ ಪುರಾತನ ಸಂಸ್ಕೃತಿಯ ಹಾಗೂ ಸಂಪ್ರದಾಯದ ಮೇಲೆ ಹೆಚ್ಚು ಬೆಳಕನ್ನು ಬಿರಬಲ್ಲ ಜಾನಪದ ಪ್ರಕಾರಗಳಲ್ಲಿ ಕಥೆ ಪ್ರಮುಖವಾದುದು. ಕಥೆಗಳಿಗೆ ಮನೋರಂಜನೆ ಒಂದು ಮುಖವಾದರೆ, ಸಾಮಾಜಿಕ, ಭಾಷಿಕ, ಚಾರಿತ್ರಿಕ, ಮನಶ್ಯಾಸ್ತ್ರೀಯ ಹಾಗೂ ಮಾನವ ಶಾಸ್ತ್ರೀಯ ದೃಷ್ಟಿಕೋನಗಳ ಮೂಲಕ ಮನುಷ್ಯ ವರ್ಗದ ತಿಳಿವಳಿಕೆ ಮತ್ತೊಂದು ಮುಖವಾಗುತ್ತದೆ. ೧೦

೧೧ ಗೀತೆ, ಕಥೆ, ಒಗಟು, ಲಾವಣಿ ಮೊದಲಾದವುಗಳಿಗಿಂತ ಹೆಚ್ಚು ವ್ಯಾಪಕವೂ ಜನಸಂಮುಖವೂ ಜನಪ್ರಿಯವೂ ಆದ ಗಾದೆ ಅನುಭವದ ಸಾಂದ್ರತೆಗೆ, ವಸ್ತು ವೈವಿಧ್ಯತೆ,

ಸಂಸ್ಕೃತಿ ಸಂಪನ್ನತೆಗೆ ವಿಚಾರ ವೈಭವಕ್ಕೆ ಹೆಸರಾದಂತಿದೆ. ಹೀಗೆ ಇದೊಂದು ಸಂಕೀರ್ಣ ಕಲೆಯಂತೆ ಭಾಸವಾದರೆ ಅದಕ್ಕೆ ಆಶ್ಚರ್ಯ ಪಡಬೇಕಾದುದಿಲ್ಲ. ಜನ ಸಾಮಾನ್ಯರ ಬದುಕು ಭಾಷೆಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವುದು ಮಾತ್ರವಲ್ಲದೆ, ಅದಕ್ಕೆ ಶಕ್ತಿಯನ್ನೂ ಸಂಪನ್ನತೆಯನ್ನೂ ತಂದುಕೊಟ್ಟಿದೆ. ಗಾದೆಯಿಲ್ಲದೆ ಅವರ ಬದುಕಿಲ್ಲ, ಭಾಷೆಯಿಲ್ಲ. ಮಾತು ಪ್ರಾರಂಭವಾಯಿತೆಂದರೆ ಗಾದೆಗಳ ಸ್ವಾತಿಮಳೆಯೇ ಪ್ರಾರಂಭವಾಗುತ್ತದೆ. ಬತ್ತಳಿಕೆಯಿಂದ ಬಾಣಗಳನ್ನು ಸೆಳೆದು ಪುಂಖಾನುಪುಂಖವಾಗಿ ಬಿಡುವಂತೆ ಅನುಭವದ ಅಕ್ಷಯ ಪಾತ್ರೆಗೆ ಕೈ ಹಾಕಿ ತೆಗೆದು ಪ್ರಯೋಗಿಸುವುದನ್ನು ಕಂಡು ಯಾರು ಬಿಲ್ಲುಂಬೆರಗಾಗಬಹುದು ೧೧.

'ಜಾನಪದ ಸಂಶೋಧನೆ' ರಾಗೌ ಅವರ ಮತ್ತೊಂದು ಜಾನಪದ ಕೃತಿಯಾಗಿದೆ. ಸಂಸ್ಕೃತಿಯ ಅಧ್ಯಯನದಲ್ಲಿ ಜಾನಪದದ ಪಾತ್ರ,ಮಾಸ್ತಮ್ಮ-ಒಂದು ವಿವರಣೆ, 'ಗಮಕ ಮತ್ತು ಜಾನಪದ' 'ಜನಪದ ಸಾಹಿತ್ಯದ ಭಾಷೆ', ;ಕೋಲಾಟದ ಪದಗಳ ರಾಚನಿಕ-ವಿಶ್ಲೇಷಣೆ', 'ಜನಪದ ಕಥೆಗಳ ಅಧ್ಯಯನದಲ್ಲಿ ವೈಜ್ಞಾನಿಕ ದೃಷ್ಟಿ' 'ಜನಪದಕಲೆಗಳು ಮತ್ತು ಮನರಂಜನೆ' , 'ಜನಪದ ಆಟಗಳು' , 'ಗಜಮೋಹಿನಿ ಒಂದು ಜನಪದ ಕಾವ್ಯ, 'ಒಗಟುಗಳ ಅಭಿವ್ಯಕ್ತಿ ತಂತ್ರ' 'ಜನಪದ ಸಾಹಿತ್ಯ-ವಸ್ತು ಮತ್ತು ಲಕ್ಷಣ', 'ಜಾನಪದ ಕ್ಷೇತ್ರದಲ್ಲಿ ಇತ್ತೀಚಿನ ಸಾಧನೆ', 'ಕರ್ನಾಟಕದಲ್ಲಿ ಜಾನಪದ ಅಧ್ಯಯನದ ಪ್ರಗತಿ,' 'ಜಾನಪದ ಸಂಗ್ರಹ ಮತ್ತು ಸಂರಕ್ಷಣೆ' ಎಂಬ ಶೀರ್ಷಿಕೆಗಳ ಒಟ್ಟು ಹದಿನಾಲ್ಕು ಪ್ರಬಂಧಗಳು ಈ ಗ್ರಂಥದಲ್ಲಿ ಸೇರ್ಪಡೆಯಾಗಿದೆ. ವಿಷಯ ವಿಶ್ಲೇಷಣೆಯ ಸೂಕ್ಷ್ಮದೃಷ್ಟಿ, ವ್ಯಾಪಕ ಅಧ್ಯಯನ, ಗಹನ-ಗಂಭೀರವಾದ ಚಿಂತನೆ, ಮಧುರವಾದ ಭಾಷೆ, ಖಚಿತ ಅಭಿಪ್ರಾಯ ಮಂಡನೆ-ಇವು ಇಲ್ಲಿನ ಪ್ರಬಂಧಗಳಲ್ಲಿ ಕಾಣಿಸುವ ವಿಶಿಷ್ಟ ಗುಣಗಳಾಗಿವೆ.

'ಜನಪದ ಮಹಾಭಾರತ ಸಮೀಕ್ಷೆ' ೨೦೦೫ರಲ್ಲಿ ಪ್ರಕಟವಾಯಿತು. ರಾಗೌ ಅವರ ಮಹತ್ವದ ಕೃತಿಗಳಲ್ಲಿ ಒಂದು.ಡಾ.ಪಿ.ಕೆ.ರಾಜಶೇಖರ ಅವರು ಸಂಪಾದಿಸಿ ಪ್ರಕಟಿಸಿದ

ಇನ್ನೊಂದು ಜನಪದ ಮಹಾಕಾವ್ಯ 'ಜನಪದ ಮಹಾಭಾರತ'ಕ್ಕೆ ಪ್ರಸ್ತಾವನೆಯಾಗಿ ಬರೆದುದು ಸಮೀಕ್ಷೆಯ ಹೆಸರಿನಲ್ಲಿ ಪ್ರತ್ಯೇಕ ಪುಸ್ತಕವಾಗಿ ಪ್ರಕಟವಾಗಿದೆ. ವಾಕ್ ಪರಂಪರೆಯ ಭಾರತ ಕಾವ್ಯಗಳನ್ನು ತೌಲನಿಕವಾಗಿ ವಿಶ್ಲೇಷಿಸುತ್ತಾ ಒಟ್ಟು ಭಾರತೀಯ ಸಂಸ್ಕತಿಯ ಸ್ಥೂಲ ಹಾಗೂ ಸೂಕ್ಷ್ಮ ವಿಮೋಚನೆಯನ್ನು ರಾಗೌ ಇಲ್ಲಿ ಕೊಟ್ಟಿದ್ದಾರೆ. ಅವರು ತಮ್ಮ ಬರೆಹದ ಬದುಕಿನ ಉದ್ದಕ್ಕೂ ನಡೆಸಿದ ಪುರಾಣ ಪರಂಪರೆಯ ಅಧ್ಯಯನ,ಇತಿಹಾಸ ಹಾಗೂ ಸಂಸ್ಕೃತಿಯ ಅಧ್ಯಯನ, ಮಾನವ ಶಾಸ್ತ್ರದ ಅಧ್ಯಯನ ಇಲ್ಲಿ ಘನೀ ಭೂತವಾಗಿರುವುದನ್ನು ಕಾಣಬಹುದು.

ಜಾನಪದದ ಅಧ್ಯಯನದಲ್ಲಿ ರಾಗೌ ಅವರೇ ಸೂಚಿಸಿರುವಂತೆ ಮೂರು ಹಂತಗಳು ವಸ್ತು ಸಂಗ್ರಹ, ವರ್ಗೀಕರಣ ಮತ್ತು ವಿಶ್ಲೇಷಣೆ. ಈ ಮೂರು ಹಂತಗಳ ಅಧ್ಯಯನದಲ್ಲಿಯೂ ಅವರು ನಿಷ್ಣಾತರು ಗಣನೀಯ ಪ್ರಮಾಣದಲ್ಲಿ ಜನಪದ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ. ಸಂಗ್ರಹಿಸಿದ್ದನ್ನು ಶಾಸ್ತ್ರೀಯವಾಗಿ ವರ್ಗೀಕರಿಸಿ ಪ್ರಕಟಿಸಿದ್ದಾರೆ. ಅವರ ಒಂದೊಂದು ಸಂಗ್ರಹವೂ ಜಾನಪದದ ಉತ್ತಮ ಸಂಗ್ರಹ ವಿಧಾನಕ್ಕೆ ಮಾದರಿಗಳು, ಮಾರ್ಗ ಸೂಚಿಗಳು ಹಿಡಿದ ಕಾರ್ಯವನ್ನು ಅಚ್ಚುಕಟ್ಟಾಗಿ ಶಾಸ್ತ್ರೀಯವಾಗಿ ಪೂರೈಸುವುದು ಅವರ ಜಾಯಮಾನ ಹಾಗಾಗಿ ಅವರ ಸಂಗ್ರಹಗಳಲ್ಲಿ ಒಂದು ಕ್ರಮ ಇದೆ, ಶಿಸ್ತು ಇದೆ, ಶಾಸ್ತ್ರೀಯತೆ ಇದೆ. ಕನ್ನಡ ಜಾನಪದದ ವೈಜ್ಞಾನಿಕ ವರ್ಗೀಕರಣದಲ್ಲಿ ಅವರು ಮೊದಲಿಗರು.

ಈ ದಿಶೆಯಲ್ಲಿ ಪಾಶ್ಚಾತ್ಯರು ನಡೆಸಿದ ಕಾರ್ಯವನ್ನು ರಾಗೌ ಚೆನ್ನಾಗಿ ಅರಿತಿದ್ದಾರೆ. ಅಭ್ಯಾಸ ಪೂರ್ಣ ಪ್ರಸ್ತಾವನೆ ಸಂಗ್ರಹಿಸಿದ ವಸ್ತುವಿನ ವರ್ಗೀಕೃತ ಅಳವಡಿಕೆ, ಟಿಪ್ಪಣಿ ಅರ್ಥಕೋಶ ಇವು ತಮ್ಮ ಸಂಗ್ರಹಗಳಿಗೆ ಅನುಸರಿಸಿದ ಶಾಸ್ತ್ರೀಯ ಕ್ರಮಗಳು ಜಾನಪದವನ್ನು ಕುರಿತ ಅವರ ಮೂರು ವಿಶ್ಲೇಷಣ ಗ್ರಂಥಗಳು ಜಾನಪದದ ಅಧ್ಯಯನಕ್ಕೆ ಆಕರ

ಗ್ರಂಥಗಳಾಗಿವೆ. ಜಾದಪದದ ತಾತ್ವಿಕ ವಿಶ್ಲೇಷಣೆ, ವಿಮರ್ಶೆ ಹಾಗೂ ಸಂಶೋಧನೆ ಈ ಮೂರು ಪಂಗಡಗಳಲ್ಲಿ ಜಾನಪದವನ್ನು ಕುರಿತು ಅವರು ಬರೆದ ಲೇಖನಗಳನ್ನು ಅಳವಡಿಸ ಬಹುದೆಂದು ತೋರುತ್ತದೆ.

ಪಾಶ್ಚಾತ್ಯ ಜಾನಪಧ ತಜ್ಞರ ಅಧ್ಯಯನದ ಬೆಳಕಿನಲ್ಲಿ ಕನ್ನಡ ಜಾನಪದವನ್ನು ಅಭ್ಯಸಿಸುವುದು ರಾಗೌ ಅವರ ವೈಶಿಷ್ಟ್ಯ ಜಾನಪದಲ್ಲಿ ಪಾಶ್ಚಾತ್ಯರು ನಡೆಸಿದ ಅಧ್ಯಯನವನ್ನು ಅಲ್ಲದೆ ಮಾನವಶಾಸ್ತ್ರ, ಸಮಾಜಶಾಸ್ತ್ರ ಹಾಗೂ ಡಾರ್ವಿನ್ನನ ವಿಕಾಸತತ್ತ್ವವನ್ನು ಅಭ್ಯಾಸ ಮಾಡಿದ್ದಾರೆ. ಇದರಿಂದಾಗಿ ಅವರ ಬರೆವಣಿಗೆಗೆ ಒಂದು ಅಧಿಕೃತತೆ ಇದೆ, ವೈಜ್ಞಾನಿಕ ಖಚಿತತೆ ಇದೆ. "ಜಾನಪದ ಸಂಕೀರ್ಣ ಮತ್ತು ಜನಪದ ಸಾಹಿತ್ಯ ರೂಪಗಳು ರಾಗೌ ಬರೆದ ಜಾನಪದ ಮೀಮಾಂಸೆಗಳು, ಜನಪದ ಸಾಹಿತ್ಯದ ಅನ್ವಯಿಕ ವಿಮರ್ಶೆಗಿಂತ ತಾತ್ವಿಕ ವಿಶ್ಲೇಷಣೆಗೇ ತಮ್ಮನ್ನು ತೊಡಗಿಸಿ ಕೊಂಡದ್ದು ಹೆಚ್ಚು.

---

## ಅಡಿ ಟಿಪ್ಪಣಿ

೧-೧. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ೫

೨-೨. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ೮

೩-೩. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ ೯

೪-೪. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ ೧೩

೫-೫. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ ೧೩

೬-೬. ನಮ್ಮ ಒಗಟು, ಡಾ.ರಾಗೌ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ೧೯೯೬, ಪುಟ ೧೪

೭-೭. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬, ಪುಟ ೫೪೮

೮-೮. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ ೫೫೧

೯-೯. ಜನಪದ ಸಾಹಿತ್ಯ ರೂಪಗಳು, ಡಾ.ರಾಗೌ, ಸಂವಹನ ಪ್ರಕಾಶನ, ೧೯೯೬ ಪುಟ ೨೩

೧೦-೧೦. ಜನಪದ ಸಾಹಿತ್ಯ ರೂಪಗಳು, ಡಾ.ರಾಗೌ, ಸಂವಹನ ಪ್ರಕಾಶನ, ೧೯೯೬ ಪುಟ ೩೩

೧೧-೧೧. ಜನಪದ ಸಾಹಿತ್ಯ ರೂಪಗಳು, ಡಾ.ರಾಗೌ, ಸಂವಹನ ಪ್ರಕಾಶನ, ೧೯೯೬ ಪುಟ ೭೭

# ಅಧ್ಯಾಯ ೬

## ಗ್ರಂಥ ಸಂಪಾದನೆ

ರಾಗೌ ಕಾವ್ಯ, ನಾಟಕ, ಸಂಶೋಧನೆ, ಜಾನಪದ ಹೀಗೆ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ಮಾಡಿ ಹೆಸರುಗಳಿಸಿದ್ದಾರೆ. ರಾಗೌ ಅವರು ಪ್ರಾಚೀನ ಅಧ್ಯಯನ ಮಾಡಿದವರು ಹಾಗೂ ವಿದ್ಯಾರ್ಥಿಗಳಿಗೆ ಬೋಧಿಸಿದವರು ಇದು ಗ್ರಂಥಸಂಪಾದನೆಯನ್ನು ಕುರಿತು ಆಸಕ್ತಿ ಬೆಳೆಯಲು ಕಾರಣವಾಯಿತು. ರಾಗೌ ಅವರು ಸಂಪಾದನ ಕ್ಷೇತ್ರದಲ್ಲಿ ಪ್ರಸಿದ್ಧರಾದ ಬಿ.ಎಸ್.ಸಣ್ಣಯ್ಯನವರ ಸಾಹಚರ್ಯದೊಂದಿಗೆ ಈ ಕ್ಷೇತ್ರವನ್ನು ಪ್ರವೇಶಿಸಿದರು. ಇವರು ಸಂಪಾದಿಸಿದ ಕೃತಿಗಳೆಂದರೆ ರನ್ನನ ಸಾಹಸಭೀಮವಿಜಯ, ರನ್ನನ ಅಜಿತನಾಥ ಪುರಾಣಂ, ಲಕ್ಷ್ಮೀಶನ ಜೈಮಿನಿ ಭಾರತ ಹಾಗೂ ಸರ್ವಜ್ಞನ ವಚನಗಳು.

'ರನ್ನನ ಸಾಹಸಭೀಮವಿಜಯಂ ಕಾವ್ಯದ ಸಂಪಾದನೆಯಲ್ಲಿ ಮೂರು ಮುದ್ರಿತ ಪ್ರತಿ ಮತ್ತು ಒಂದು ಕಾಗದದ ಪ್ರತಿಯುನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಎಂ.ಎ.ರಾಮಾನುಜಯ್ಯಂಗಾರ್ಯರು ಮತ್ತು ಎಸ್.ಜಿ.ನರಸಿಂಹಚಾರ್ಯರು ೧೮೯೫ರಲ್ಲಿಯೇ ಎರಡು ಪ್ರತಿಗಳ ನೆರವಿನಿಂದ ಪ್ರಸ್ತುತ ಕೃತಿಯನ್ನು ಪರಿಷ್ಕರಿಸಿ ಪ್ರಪ್ರಥಮವಾಗಿ ಪ್ರಕಟಸಿದ್ದರು. ಅನಂತರದಲ್ಲಿ ರಾಮಾನುಜಯ್ಯಂಗಾರ್ಯರೊಬ್ಬರೇ ೧೯೧೯ರಲ್ಲಿ ದ್ವಿತೀಯ ಪರಿಷ್ಕ್ರತ ಆವೃತ್ತಿಯನ್ನು ತಂದರು. ಈ ಆವೃತ್ತಿಯ ಮುದ್ರಿತ ಪ್ರತಿಗಳು ಅಲಭ್ಯವಾಗ ತೊಡಗಿದಾಗ ಸುಬ್ರಾಯಭಟ್ ಎಂಬುವರು ೧೯೭೫ರಲ್ಲಿ ತಮ್ಮ ಆವೃತ್ತಿಯನ್ನು ಪ್ರಕಾಶಪಡಿಸಿದ್ದರು. ಈ ಹಿನ್ನೆಲೆಯಲ್ಲಿ ರಾಗೌ ಮತ್ತು ಬಿ.ಎಸ್. ಸಣ್ಣಯ್ಯನವರು ಪೂರ್ವದ ಆವೃತ್ತಿಗಳನ್ನು ಗಮನಿಸಿ, ಹೊಸದೊಂದು ಕಾಗದದ ಪ್ರತಿ ಬಳಸಿದ್ದು ಶ್ರದ್ಧೆಯ ದ್ಯೋತಕ.'

'ಸಾಹಜಭೀಮ ವಿಜಯಂ' ಸತ್ಯಾಶ್ರಯ ಆಳುತ್ತಿದ್ದ ಕಾಲದ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಸತ್ಯಾಶ್ರಯ ರಾಜಕುಮಾರನಾಗಿದ್ದಾಗಲೆ ತನ್ನ ತಂದೆಯ

ಜೊತೆಯಲ್ಲಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ. ಆಗ ಅವನು ತನ್ನ ಅಸಾಧಾರಣ ಪರಾಕ್ರಮವನ್ನು ತೋರಿದ್ದ ಎಂಬುದನ್ನು ರನ್ನ ಸಾಕ್ಷಿಕರಿಸುತ್ತಾ ಚಾರಿತ್ರಿಕ ಧ್ವನಿಯಾಗಿ ಕಂಡುಬರುತ್ತಾನೆ.

ಸಾಹಸ ಭೀಮ ವಿಜಯಂ ಕೃತಿಯು ಹತ್ತನೇ ಶತಮಾನಕ್ಕೆ ಸೇರಿದುದ್ದರಿಂದ ಆ ಶತಮಾನದ ಸಾಹಿತಿಕ ಲಕ್ಷಣಗಳನ್ನು ರಾಗೌ ಪ್ರಸ್ತಾಪಿಸಿದ್ದಾರೆ. ನಂತರ ರನ್ನನ ತಂದೆ ತಾಯಿ, ಗುರು, ಕಾಲ, ಚಾವುಂಡರಾಯ, ತೈಲಪ, ಅತ್ತಿಮಬ್ಬೆಯರಿಂದ ದೊರೆತ ಪ್ರೋತ್ಸಾಹ ಮೊದಲಾದವುಗಳನ್ನು ಕ್ರಮಬದ್ಧವಾಗಿ ನಿರೂಪಿಸಿದ್ದಾರೆ. ರನ್ನನ ಕೃತಿಗಳ ಸಂಖ್ಯೆ ಇಂದಿಗೂ ನಿಖರವಾಗಿ ಹೇಳಲಾಗಿಲ್ಲ. ಅಗತ್ಯಕ್ಕೆ ತಕ್ಕಂತೆ ಚರ್ಚೆಯನ್ನು ಮಾಡುತ್ತಾ ಉಪಲಬ್ಧ ಕೃತಿಗಳನ್ನು ಪರಿಚಯಿಸುವುದರ ಮೂಲಕ ಮೊದಲ ಬಾರಿಗೆ ಓದುವವರಿಗೆ ಉಪಯುಕ್ತವಾಗಿದೆ. ಈ ಕೃತಿಯು ಲೌಕಿಕ ಕಾವ್ಯದ ಪರಂಪರೆಗೆ ಸೇರುತ್ತದೆ ಎಂಬುದಕ್ಕೆ ರಾಗೌ ಅವರು ಸಾಕಷ್ಟು ಆಕರಗಳನ್ನು ಗುರುತಿಸಿದ್ದಾರೆ. ವ್ಯಾಸಭಾರತ, ಭಾಸನ ಊರುಭಂಗ, ಭಟ್ಟ ನಾರಾಯಣ ವೇಣಿ ಸಂಹಾರ, ಪಂಪಭಾರತ ಈ ಕೃತಿಗಳೊಂದಿಗೆ ಗದಾಯುದ್ಧವನ್ನಿಟ್ಟು ತೌಲನಿಕ ಅಭ್ಯಾಸ ನಡೆಸಿ ರನ್ನ ಪೂರ್ವಕಾವ್ಯಗಳಿಂದ ಉಪಕೃತನಾಗಿದ್ದರೂ ಸ್ವೋಪಜ್ಞಶೀಲನಾಗಿ ತನ್ನ ಕಾವ್ಯವನ್ನು ಸ್ವತಂತ್ರ ಕಾವ್ಯವಾಗಿ ರೂಪಿಸಿರುವುದನ್ನು ಮನಗಾಣಿಸಿರುವ ರೀತಿಯು ರಾಗೌ ಅವರ ಸೂಕ್ಷ್ಮ ವಿಮರ್ಶಾ ದೃಷ್ಟಿಗೆ ಸಾಕ್ಷಿಯಾಗಿದೆ.

ರಾಗೌ ಅವರು ಪಂಪನ ರೀತಿಯಲ್ಲಿ ರನ್ನನು ತನ್ನ ಅನ್ನದಾತನನ್ನು ಕಾವ್ಯದ ನಾಯಕನಾಗಿ ಸಮೀಕರಿಸಿರುವುದು ಐತಿಹಾಸಿಕ ಆಭಾಸವೆನಿಸಿದರೂ ಕಾವ್ಯಕ್ಕೆ ಹೊಸ ಆಯಾಮ ದೊರೆತಿದೆ ಎಂಬ ಅಭಿಪ್ರಾಯವನ್ನು ಸಂಪಾದನೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಕೃತಿಯಲ್ಲಿ ಬರುವ ನಾಟಕೀಯ ಸನ್ನಿವೇಶ, ದುರ್ಯೋಧನನ ಉದಾತ್ತತೆ, ಕಥಾನಾಯಕ ಭೀಮನ ಪಾತ್ರವನ್ನು ವಿಶ್ಲೇಷಿಸುತ್ತ ಈತನನ್ನೇ ನಾಯಕನಾಗಿಸುವ ಹಿಂದಿದ್ದ ಉದ್ದೇಶವನ್ನು

ಚಿಂತಿಸುತ್ತ ಸತ್ಯಾಶ್ರಯ ಇರಿವಬೆಡಂಗ ಭೀಮ ಮತ್ತು ಅರ್ಜುನ ಇಬ್ಬರೇ ಎಂದೂ ಇವರಲ್ಲಿ ಪಂಪ ಅರ್ಜುನನ್ನು ಆರಿಸಿಕೊಂಡಿದ್ದರಿಂದ ಭೀಮನ ಆಯ್ಕೆ ಅನಿವಾರ್ಯವಾಗಿತ್ತೆಂದೂ ಸರಿಯಾಗಿಯೇ ಗುರುತಿಸಿದ್ದಾರೆ.

'ಅಜಿತತೀರ್ಥಂಕರ ಪುರಾಣಂ' ಕೃತಿಯನ್ನು ರಾಗೌ ಮತ್ತು ಸಣ್ಣಯ್ಯನವರು ಸೇರಿ ೧೯೭೭ರಲ್ಲಿ ಸಂಪಾದಿಸಿ ಪ್ರಕಟಿಸಿದರು. ಎಂ.ಎ.ರಾಮಾನುಜಯ್ಯಂಗಾರ್ಯರು ೧೯೧೦ರಲ್ಲಿ ವಿವಿಧ ಹಸ್ತಪ್ರತಿಗಳ ನೆರವಿನಿಂದ ಪರಿಷ್ಕರಿಸಿದ್ದರೂ ಗ್ರಂಥ ಸಂಪಾದನ ಶಾಸ್ತ್ರವು ತಾತ್ವಿಕವಾಗಿ ಇನ್ನೂ ಮೂರ್ತರೂಪ ಪಡೆಯದಿದ್ದುದರಿಂದ ಇವರು ಪ್ರತಿಗಳನ್ನು ವಿವರಗಳನ್ನು ದಾಖಲಿಸದೇ ಹೋದರು. ಇದಾದ ಬಳಿಕ ಎಚ್.ದೇವಿರಪ್ಪ ಮತ್ತು ದೇ.ಜವರೇಗೌಡರು ೧೯೫೫ರಲ್ಲಿ ಪರಿಷ್ಕರಿಸಿದರು. ಪಂಪ, ರನ್ನ, ಜನ್ನ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ ಈ ಕವಿಕೃತಿಗಳಿಗೆ ಓದುಗರ ಸಂಖ್ಯೆ ಅಪಾರ. ಇದಕ್ಕೆ ಇವು ಬಹುಕಾಲ ಕನ್ನಡ ವಿದ್ಯಾರ್ಥಿಗಳಿಗೆ ಪಠ್ಯವಾಗಿದ್ದುದೂ ಕಾರಣವಾಗಿರಬಹುದು. ಈ ಕೃತಿಯ ಪರಿಷ್ಕರಣೆ ಜನ ಮನ್ನಣೆಯನ್ನು ಪಡೆದುಕೊಂಡಿದೆ.

ಇತರ ಕೃತಿಯಲ್ಲಿನ ಆರಂಭಿಕ ಪ್ರಸ್ತಾವನೆಯ ಮಾದರಿಯಲ್ಲಿ ಪ್ರಸ್ತಾವನೆ ಮುಂದುವರೆಯುತ್ತದೆ. ಮೊದಲಿನ ಲೌಕಿಕ ಕಾವ್ಯ ಪರಂಪರೆಯ ಹಿನ್ನೆಲೆ ನಿರೂಪಿಸಿದ್ದಾರೆ. ಈ ಮೂಲಕ ಕೃತಿಯನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವವರಿಗೆ ಉಪಯುಕ್ತವಾಗಿದೆ. ಈ ಕೃತಿಯು ಧಾರ್ಮಿಕ ಹಿನ್ನೆಲೆ ಹೊಂದಿರುವುದರಿಂದ ಅಷ್ಟು ಮಹತ್ವವಾದುದಲ್ಲ. ಹೀಗಾಗಿ ಇದು ಪ್ರಥಮ ದರ್ಜೆ ಕವಿಯ ದ್ವಿತೀಯದರ್ಜೆ ಕೃತಿ ಎಂದು ವರ್ಣಿಸಲಾಗಿದೆ. ಈ ಕೃತಿಯು ವೀರರಸ ಹಾಗೂ ಶಾಂತರಸವನ್ನು ಅಭಿವ್ಯಕ್ತಿಸುತ್ತವೆಯೇ ಹೊರತು ನವರಸಗಳಿಗೆ ವೇದಿಕೆಯಾಗುವುದಿಲ್ಲ ಎನ್ನುವ ಮಾತು ಅವರ ವ್ಯಾಪಕ ಅಧ್ಯಯನದ ಹಿನ್ನೆಲೆಯಲ್ಲಿ ಬಂದದ್ದೆಂದು ಭಾವಿಸಬಹುದು.

ರನ್ನನ ಈ ಕೃತಿಯಲ್ಲಿ ಕಥಾನಾಯಕ ಅಜಿತ ತೀರ್ಥಂಕರನಿಗಿಂತ ಸಗರ ಚಕ್ರವರ್ತಿಯ ಕಥೆಯ ಹಾಗೂ ಅತ್ತಿಮಬ್ಬೆಯ ಪ್ರಸಂಗ ಆಕರ್ಷಕ ಭಾಗವೆಂಬುದನ್ನು ಗಮನಿಸಬಹುದು. ಇಲ್ಲಿ ಬರುವ ಚಾರಿತ್ರಿಕ ಸಂಗತಿಗಳು, ಅತ್ತಿಮಬ್ಬೆಯ ವ್ಯಕ್ತಿತ್ವ ಚಿತ್ರಣ, ವೈರಾಗ್ಯ ನಿರೂಪಣೆ ಮತ್ತು ಸಗರನ ಕಥೆ ಕವಿಯ ಮಹತ್ವವನ್ನರುಹುತ್ತವೆಂದು ಈ ಒಂದೊಂದು ಅಂಶವನ್ನೂ ವಿವರಿಸಲಾಗಿದೆ. ತೈಲಪ ಹಾಗೂ ಅತ್ತಿಮಬ್ಬೆಯ ಚರಿತ್ರೆಯ ಶಾಸನ ಹಾಗೂ ಇತಿಹಾಸದ ಆಕರಗಳನ್ನು ಬಳಸಲಾಗಿದೆ . ಅಜಿತತೀರ್ಥಂಕರನ ವೈರಾಗ್ಯ ಜೀವನವನ್ನು ನಿರೂಪಿಸುವಾಗ ಕವಿಯ ನ್ಯೂನ್ಯತೆಗಳನ್ನು ಗಮನಿಸಲಾಗಿದ್ದು, ಪಂಪನ ಪ್ರಭಾವವು ಅಲ್ಲಲ್ಲಿ ಕಂಡುಬರುತ್ತದೆ. ಒಟ್ಟಿನಲ್ಲಿ ಪ್ರಸ್ತಾವನೆಗಳು ರಾಗೌ ಅವರ ಸೂಕ್ಷ್ಮ ವಿಮರ್ಶಾ ಶಕ್ತಿಯನ್ನು ಪ್ರತಿಫಲಿಸುವಂತಿವೆ.

ಲಕ್ಷ್ಮೀಶನ ಜೈಮಿನಿ ಭಾರತವನ್ನು ಏಳು ಹಸ್ತಗಳ ಪ್ರತಿಗಳ ಸಹಾಯದೊಂದಿಗೆ ರಾಗೌ ಹಾಗೂ ಸಣ್ಣಯ್ಯನವರು ಪರಿಷ್ಕರಿಸಿದ್ದಾರೆ ಇದು ೧೯೬೩ ರಲ್ಲಿ ಪ್ರಕಟಗೊಂಡಿತು. ಮೊಗ್ಲಿಂಗ್ ಬಹಳ ಹಿಂದೆಯೇ ಜೈಮಿನಿಭಾರತವನ್ನು ಅಚ್ಚು ಹಾರಿಸಿದ್ದರು. ಈ ಕೃತಿಯನ್ನು ಐದು ಓಲೆ , ಒಂದು ಕಾಗದ, ಒಂದು ಕಲ್ಲಚ್ಚು ಪ್ರತಿಯನ್ನು ಬಳಸಿ ಸಂಪಾದಿಸಲಾಗಿದೆ.

ಈ ಕೃತಿಯ ಪ್ರಸ್ತಾವನೆಯನ್ನು ಕವಿಯ ಇತಿವೃತ್ತದೊಂದಿಗೆ ಆರಂಭವಾಗುತ್ತದೆ. ಈ ಕವಿಯ ಜನ್ಮ ಸ್ಥಳದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದರು ರಾಗೌ ಅವರು ಚಿಕ್ಕಮಂಗಳೂರು ಜಿಲ್ಲೆಯ ದೇವನೂರನ್ನು ಕವಿಯ ಹುಟ್ಟೂರಾಗಿ ಅಂಗೀಕರಿಸಿದ್ದಾರೆ. ಭಕ್ತಿ ಮತ್ತು ಶೃಂಗಾರ ಪ್ರಧಾನವಾದುದು. ಕೃತಿಯ ರಚನೆಯ ಬಗ್ಗೆ ಕವಿಗೆ ಇರುವ ಶ್ರದ್ಧೆ ಮತ್ತು ನಮ್ರತೆಯನ್ನು ಗುರುತಿಸಿದ್ದಾರೆ. ಮಧ್ಯಕಾಲೀನ ಸಾಹಿತ್ಯದ ಲಕ್ಷಣಗಳನ್ನು ಕೃತಿಯ ಅಂತರ್ಯದಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಜೈಮಿನಿ ಭಾರತ ಒಂದು ಕಥಾಕೋಶ. ಇದು ಕಥೆಯ ಕಥೆ ಎನ್ನಲಾಗಿದೆ. ರಾಗೌ ಅವರು ಇದನ್ನು ಕಥಾಗುಚ್ಛ ಎಂದು ಕರೆದಿರುವುದು ಸರಿಯಾಗಿದೆ. ಕಥೆ

ಜೈಮಿನಿಯದಾದರೂ ಕಲೆ ಲಕ್ಷ್ಮೀಶನದೆಂದು ಕವಿಯ ಬಗ್ಗೆ ಮೆಚ್ಚುನುಡಿಯಾದ್ದರೂ ಅಶ್ವಮೇಧವು ಹಿಂಸೆಯನ್ನು ಹುಟ್ಟು ಹಾಕುವುದೆಂದು ಹೇಳಿರುವುದು ಜೀವಪರ ಧೋರಣೆಯ ಪ್ರತೀಕ . ರಾಗೌ ಅವರು ಕಾವ್ಯದ ಕಥೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಪಾತ್ರಗಳಲ್ಲಿ ವ್ಯಕ್ತವಾಗಿರುವ ಕೃಷ್ಣನ ಭಕ್ತಿ. ಪ್ರಕೃತಿವರ್ಣನೆ. ಶೃಂಗಾರ ವರ್ಣನೆ, ಯುದ್ಧ ಹಾಗೂ ಬೇಟೆಯ ವರ್ಣನೆಗಳಲ್ಲಿನ ವೈವಿಧ್ಯಗಳನ್ನು ಪ್ರಸ್ತಾಪಿಸುತ್ತಾ ಲಕ್ಷ್ಮೀಶನ ಕವಿ ಪ್ರತಿಭೆಯ ಬಗ್ಗೆ ಶಾಘ್ಲನೆಯನ್ನು ವ್ಯಕ್ತಪಡಿಸಿದ್ದಾರೆ.[೨]

'ಸರ್ವಜ್ಞ ವಚನಗಳು' ರಾಗೌ ಸಂಪಾದಿಸಿದ ಮತ್ತೊಂದು ಕೃತಿ.[೩] ಅತ್ಯಂತ ಜನಪ್ರಿಯ ಕವಿಯಾದ ಸರ್ವಜ್ಞನ ತ್ರಿಪದಿಗಳ ಪಾಠ್ಯಾಂತರ ಸಮಸ್ಯೆ ಹಾಗೂ ಪ್ರಕ್ಷಿಪ್ತ ವಚನಗಳ ನಡುವೆ ಸಿಲುಕಿಕೊಂಡು ಸೂಕ್ತ ಪಾಠ ನಿರ್ಣಯ ಮಾಡುವುದು ತುಂಬಾ ದುಸ್ತರವಾದ ಹಾಗೂ ಸೂಕ್ಷ್ಮವಾದ ಕಾರ್ಯ. ರಾಗೌ ಈ ಸಮಸ್ಯೆಗಳನ್ನೆಲ್ಲಾ ಸಮರ್ಥವಾಗಿ ನಿರ್ವಹಿಸಿ ಅಧಿಕೃತತೆಗೆ ಹೆಚ್ಚು ಹತ್ತಿರವಾದ ಪರಿಷ್ಕರಣವೊಂದನ್ನು ತಯಾರಿಸಿದ್ದಾರೆ. ಆದರೂ ಇದು ಅಂತಿಮವೆಂದು ಅವರು ತಿಳಿದಿಲ್ಲ. ' ಅವನ ವಚನಗಳ ಹೊಸ ಪರಿಷ್ಕರಣಗಳು ಸಂಶೋಧನೆಗಳೂ ಬರುತ್ತಿರಲೇ ಬೇಕಾಗುತ್ತದೆ.' ಎಂಬ ಮಾತು ಅವರ ಸದ್ಯದ ಈ ಕೃತಿಯ ಪ್ರಸ್ತುತತೆಯನ್ನು ಹೇಳುವುದರ ಜೊತೆಗೆ ಮುಂದೆ ಬರಬಹುದಾದ ವಿಮರ್ಶಾತ್ಮಕ ಪರಿಷ್ಕರಣಗಳ ಅಗತ್ಯವನ್ನು ತಿಳಿಸುತ್ತದೆ.

ಗ್ರಂಥ ಸಂಪಾದನೆಯನ್ನು ತುಂಬಾ ಗಂಭೀರವಾಗಿ ಪರಿಗಣಿಸಿದ ವಿದ್ವಾಂಸರು ರಾಗೌ ಪಾಠಸ್ವೀಕರಣ ಪ್ರಕ್ರಿಯೆಯಲ್ಲಿ ವಿವಿಧ ಪ್ರಮಾಣಗಳನ್ನು ಅನುಸರಿಸಿ ತುಂಬಾ ಎಚ್ಚರವಹಿಸಿದ್ದಾರೆ. ಈ ನಾಲ್ಕೂ ಪರಿಷ್ಕರಣಗಳಿಗೆ ವಿಮಾರ್ಶಾತ್ಮಕವೂ, ಸಂಶೋಧನಾತ್ಮಕವೂ ಆದ ಸುದೀರ್ಘ ಪ್ರಸ್ತಾವನೆಗಳನ್ನು ಬರೆದಿದ್ದಾರೆ. ಅನುಬಂಧದಲ್ಲಿ ಅಧಿಕಾ ಪಾಠಗಳು, ಕಥಾಸಾರ, ಅಗತ್ಯ ಟಿಪ್ಪಣಿಗಳು, ಅರ್ಥಕೋಶ, ಪದ್ಯಗಳ, ವಚನಗಳ ಅಕಾರಾದಿಗಳನ್ನು

ಒದಗಿಸಿದ್ದಾರೆ. ಈ ಶಾಸ್ತ್ರಿಯ ಕ್ರಮ ಕೃತಿಗಳ ಉಪಯುಕ್ತತೆಯನ್ನು ಹೆಚ್ಚಿಸಿದೆ. ಪ್ರಾಚೀನ ಸಾಹಿತ್ಯ ಕೃತಿಗಳ ಪರಿಷ್ಕರಣೆಯಲ್ಲೂ ಜಾನಪದ ಸಂಗ್ರಹಗಳನ್ನು ಸಿದ್ಧ ಪಡಿಸುವಲ್ಲೂ ರಾಗೌ ಅನುಸರಿಸುವ ಶಾಸ್ತ್ರೀಯ ವಿಧಾನಗಳು ತಾತ್ತ್ವಿಕವಾಗಿ ಭಿನ್ನ ನೆಲೆಯವಾದರೂ ಸ್ವರೂಪದಲ್ಲಿ ಬೇರೆಯೆನಿಸುವುದಿಲ್ಲ. ಅವುಗಳನ್ನು ಸಿದ್ಧ ಪಡಿಸುವಾಗ ಅವರು ತೋರಿಸುವ ಶ್ರಮ, ಶ್ರದ್ಧೆ, ಪ್ರಯತ್ನದ ಪ್ರಾಮಾಣಿಕತೆಯಲ್ಲಿ ವ್ಯತ್ಯಾಸ ಕಂಡು ಬರುವುದಿಲ್ಲ. ಹಿಡಿದ ಯಾವ ಕಾರ್ಯವನ್ನು ರಾಗೌ ಹೀಗೆಯೇ ಪೂರ್ಣಗೊಳಿಸುವವರು.[೩]

---

## ಅಡಿ ಟಿಪ್ಪಣಿ

೧-೧. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ ೫೭೯

೨-೨. ಅಭಿಜಾತ, ಅಭಿನಂದನ ಗ್ರಂಥ, ಸಂವಹನ ಪ್ರಕಾಶನ, ೨೦೦೬ ಪುಟ ೫೧೩

೩-೩. ಡಾ.ರಾಗೌ ವ್ಯಕ್ತಿ ಅಭಿವ್ಯಕ್ತಿ, ಬೋರೇಗೌಡ ಚಿಕ್ಕಮರಳಿ, ಅವಿನಾಶ್ ಗ್ರಾಫಿಕ್ಸ್, ೨೦೦೯ ಪುಟ ೪೧-೪೨.

# ಅಧ್ಯಾಯ-೭

## ಸಂಪಾದಿತ ಕೃತಿಗಳು

ಸಂಪಾದನಾ ಕ್ಷೇತ್ರದಲ್ಲಿಯೂ ದುಡಿದಿದ್ದಾರೆ ರಾಗೌ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿತ್ತಾ ಬಂದಿರುವ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಪರಂಪರೆಯನ್ನು ಹೊಂದಿರುವ 'ಪ್ರಬುದ್ಧ ಕರ್ಣಾಟಕ' ತ್ರೈಮಾಸಿಕದ ಸಂಪಾದಕರಾಗಿಯೂ ಪ್ರಧಾನ ಗುರುದತ್ತ ಅವರೊಡನೆ ಕೆಲಸ ಮಾಡಿದ್ದಾರೆ. ಪ್ರತಿಕೆ ತನ್ನ ಚೈತನ್ಯವನ್ನು ಕಳೆದುಕೊಂಡು ಕಾಲಕ್ಕೆ ಸರಿಯಾಗಿ ಓದುಗರಿಗೆ ಮುಟ್ಟದೆ ಅನಿಶ್ಚಿತತೆಯನ್ನು ಅನುಭವಿಸುತ್ತಿದ್ದ ಕಾಲದಲ್ಲಿ ರಾಗೌ ಅದರ ಸಂಪಾದಕರಾಗಿ ಪುನಶ್ಚೇತನ ಕೊಟ್ಟವರು ನಿಗದಿತ ವೇಳೆಗೆ ಓದುಗರಿಗೆ ತಲುಪುವಂತೆ ನೋಡಿ ಕೊಂಡವರು. ಮುಖಪುಟಕ್ಕೆ ಆಕರ್ಷಕ ಆಕಾರ ಕೊಡುವುದರಿಂದ ಹಿಡಿದು ಅದರ ಪರಿವಿಡಿಯಲ್ಲಿ ಕಥೆ, ಕವನ ನಾಟಕಗಳಂತಹ ಸಂಪಾದಕರಾಗಿದ್ದ ಅವಧಿಯಲ್ಲಿ ಬಿ.ಎಂ.ಶ್ರೀ,ಕೈಲಾಸಂ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಟಿ.ಎಸ್. ಸೃಜನಶೀಲ ಪ್ರಕಾರಗಳನ್ನು ಸೇರಿಸಿ ಮೊದಲಿದ್ದ ವೈಭವವನ್ನು ತರಲು ಶ್ರಮಿಸಿದವರು. ಅವರು ವೆಂಕಣ್ಣಯ್ಯ ಅವರ ಹೆಸರಿನಲ್ಲಿ ತಂದ ವಿಶೇಷ ಸಂಚಿಕೆಗಳು ಪ್ರಬುದ್ಧ ಕರ್ಣಾಟಕದ ಇತಿಹಾಸದಲ್ಲಿ ದಾಖಲೆಗಳಾಗಿ ಉಳಿಯುವಂತಹವು.

ರಾಗೌ ಅವರ ಆದರ್ಶ ಪ್ರಾಯವಾದ ಸಂಪಾದನಾ ಕಾರ್ಯಕ್ಕೆ ಇವು ನಿದರ್ಶನಗಳು. ಸಂಪುಟ ೬೮ ರ ೪ನೇ ಸಂಚಿಕೆ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಕುರಿತಿದ್ದು ಮೇಲಿನ ಸಂಚಿಕೆಗಳ ಸಾಲಿಗೆ ಸೇರುವಂತಹುದು. ಬಿ.ಎಂ.ಶ್ರೀ, ಕೈಲಾಸಂ, ಮಾಸ್ತಿ ಹಾಗೂ ವೆಂಕಣ್ಣಯ್ಯನವರನ್ನು ಕುರಿತು ಬಂದ ವಿಶೇಷ ಸಂಚಿಕೆಗಳು ಕ್ರಮವಾಗಿ ಬಿ.ಎಂ. ಶ್ರೀ ನೂರರ ನೆನಪು ಕೈಲಾಸಂ, ಬದುಕು ಬರಹ ಮಾಸ್ತಿಯವರು ಮತ್ತು ಚಿಕ್ಕವೀರರಾಜೇಂದ್ರ, ವಿನಯೋನ್ನತಿ ಎಂಬ ಹೆಸರುಗಳಲ್ಲಿ ಪುಸ್ತಕ ರೂಪದಲ್ಲಿಯೂ ಪ್ರಕಟವಾಗಿದೆ. ರಾಗೌ

ಸಂಪಾದಿಸಿದ ಪುಸ್ತಕಗಳಲ್ಲಿ ಕವಿಗಳು ಕಂಡ ಮೈಸೂರು ವಿಶಿಷ್ಟ ಬಗೆಯದು ಮೈಸೂರು ನಗರ ಮತ್ತು ಅದರ ಸುತ್ತಣ ಪರಿಸರದಿಂದ ಪ್ರೇರಿತರಾಗಿ ನಾಡಿನ ಪ್ರಸಿದ್ಧ ಕವಿತೆಗಳು ಇಲ್ಲವೆ ಆಧುನಿಕ ಕನ್ನಡ ಕಾವ್ಯದ ಬಗೆಗೆ ರಾಗೌ ಹೊಂದಿರುವ ಪರಿಜ್ಞಾನವನ್ನು ಇದು ಸಾಬೀತು ಪಡಿಸುತ್ತದೆ. ಮೈಸೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಉಪಯುಕ್ತವಾಗಿದೆ.

ಡಾ॥ರಾಗೌ ಅವರ ಸಂಪಾದಿತ ಕೃತಿಗಳು ಒಟ್ಟು ಒಂಭತ್ತು. ಇವುಗಳಲ್ಲಿ ನಾಲ್ಕು ೧೯೯೦ ಅನಂತರದಲ್ಲಿ ಪ್ರಕಟವಾದವು. 'ಬೇಂದ್ರೆ ಸಾಹಿತ್ಯಸಮಾಲೋಚನ' (೧೯೯೬), 'ಮಹಿಳಾ ಅಧ್ಯಯನದ ಆಯಾಮಗಳು' (೨೦೦೮), 'ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ  ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟ ಇದರ ಭಾಗ ಎರಡು (೨೦೦೮), ಭಾಗ ಮೂರು (೨೦೦೮). 'ಬೇಂದ್ರೆ ಸಾಹಿತ್ಯ ಸಮಾಲೋಚನೆ' ದ.ರಾ. ಬೇಂದ್ರೆ ಅವರ ಜನ್ಮ ಶತಮಾನೋತ್ಸವದ ಅಂಗವಾಗಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ನಡೆಸಿದ ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧಗಳ, ಸಂವಾದದ ಅನಿಸಿಕೆಗಳ, ಅಧ್ಯಕ್ಷರ ಭಾಷಣಗಳ ಹಾಗೂ ಉದ್ಘಾಟನೆ, ಸಮಾರೋಪ ಭಾಷಣಗಳ ಸಂಕಲನ.

ಸಮಕಾಲೀನ ಸಂದರ್ಭದ ಕನ್ನಡದ ಮಂಚೂಣಿಯ ವಿಮರ್ಶಕರ ಹಾಗೂ ವಿದ್ವಾಂಸರ ಬರೆಹಗಳಿಂದ ಕೂಡಿದ ಈ ಕೃತಿ ಬೇಂದ್ರೆ ಅಧ್ಯಯನದ ಸಂದರ್ಭದಲ್ಲಿ ಗಮನಿಸಬೇಕಾದ ಒಂದು ಮುಖ್ಯ ಕೃತಿಯಾಗಿ ರೂಪುಗೊಂಡಿರುವುದು ರಾಗೌ ಅವರ ಶ್ರದ್ಧಾಪೂರ್ವಕ ಪ್ರಯತ್ನದ ಫಲ. 'ಮಹಿಳಾ ಅಧ್ಯಯನದ ಆಯಾಮಗಳು' ಸಾಹಿತ್ಯೇತರ ಹಾಗೂ ಸಾಹಿತ್ಯಕ ಅಧ್ಯಯನದ ಸಂದರ್ಭಗಳೆರಡರಲ್ಲಿಯೂ ಗಮನಿಸಬೇಕಾದ ಕೃತಿ. ಅಗಲಿದ ತಮ್ಮ ಮಗಳು ಕವಿತಾಳ ನೆನಪಿನಲ್ಲಿ ರಾಗೌ ಪ್ರತಿ ವರ್ಷ ನಡೆಸುವ, ಮಹಿಳಾ ಸಮಸ್ಯೆಗಳನ್ನು ಕುರಿತಾದ ಸ್ಮಾರಕ ಉಪನ್ಯಾಸಗಳನ್ನು ಕಿರುಹೊತ್ತಗೆಯಾಗಿ ಪ್ರಕಟಿಸುತ್ತಾ ಬಂದಿದ್ದಾರೆ, 'ಕವಿತಾ ಸ್ಮಾರಕ ಪ್ರಶಸ್ತಿ' ಪ್ರಧಾನ ಸಮಾರಂಭದ ಹತ್ತನೆಯ ವರ್ಷದ

ಸಂದರ್ಭದಲ್ಲಿ ಆ ಹತ್ತೂ ವರ್ಷಗಳ ಕಿರು ಹೊತ್ತಗೆಗಳು ಇಲ್ಲಿ ಸಂಕಲನಗೊಂಡು ಒಂದು ಹೆಬ್ಬೊತ್ತಗೆಯಾಗಿದೆ. ಸಮಾಜಶಾಸ್ತ್ರಜ್ಞರು, ಚಿಂತಕರು, ಕಾನೂನು, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಹಾಗೂ ಮಾಧ್ಯಮ ತಜ್ಞರು ಹತ್ತು ಜನ ಮಹಿಳಾ ಅಧ್ಯಯನದ ಹಲವು ಮುಖಗಳನ್ನು ಕುರಿತು ಬರೆದ ನಲವತ್ತರಿಂದ ಅರವತ್ತು ಪುಟಗಳ ವ್ಯಾಪ್ತಿಯ ಹತ್ತು ಸುದೀರ್ಘ ಪ್ರಬಂಧಗಳು ಇಲ್ಲಿ ಸಂಕಲನಗೊಂಡಿದೆ.

ಡಾ॥ ಹಾ.ಮಾ. ನಾಯಕರು ರೂಪಿಸಿದ ಯೋಜನೆಯನ್ವಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳನ್ನು ಪ್ರಕಟಿಸುತ್ತಾ ಬಂದಿದೆ. ನಾಲ್ಕು ಸಂಪುಟಗಳೂ,ಐದನೆಯ ಸಂಪುಟದ ಮೊದಲ ಭಾಗವೂ ಪ್ರಕಟವಾದ ನಂತರ ಯೋಜನೆ ಕೆಲವು ಕಾಲ ಸ್ಥಗಿತಗೊಂಡಿತ್ತು. ಅದು ಮತ್ತೆ ಆರಂಭವಾದಾಗ ಅವುಗಳ ಸಂಪಾದನಾ ಜವಬ್ದಾರಿಯನ್ನು ರಾಗೌ ಹೊತ್ತಿದ್ದಾರೆ. ಐದನೆಯ ಸಂಪುಟದ ೧೮೨೫ರಿಂದ ೧೯೦೦ ಹಾಗೂ ೧೯೦೧ರಿಂದ ೧೯೭೫ ರ ಅವಧಿಯ ಎರಡು ಮತ್ತು ಮೂರನೆಯ ಭಾಗಗಳು ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿವೆ. ಮುಂಬರುವ ದಿನಗಳಲ್ಲಿ ಸರ್ಕಾರದ ಹಾಗೂ ಸಂಬಂಧಿಸಿದ ಇಲಾಖೆಗಳ ಆರ್ಥಿಕ ನೆರವಿನೊಡನೆ ವರ್ಷಕ್ಕೆ ಎರಡು ಸಂಪುಟಗಳಂತೆ ಪ್ರಕಟಿಸಿ ಯೋಜನೆಯನ್ನು ಪೂರ್ಣಗೊಳಿಸುವ ಭರವಸೆಯನ್ನು ರಾಗೌ ಹೊಂದಿದ್ದಾರೆ.

# ಅಧ್ಯಾಯ-೮

## ಮಕ್ಕಳ ಬರಹಗಳು

ಡಾ॥ ರಾಗೌ ಅವರು ಮಕ್ಕಳಿಗಾಗಿ ರಚಿಸಿದ ಕೃತಿಗಳು ಮೂರು ಕಂದನ ಕವನಗಳು (೧೯೭೮) ಕುಮಾರರಾಮ, (೧೯೭೮) ಮತ್ತು ಆರು ಪ್ರಾಣಿ ಕಥೆಗಳು (೧೯೭೮).

ನಮ್ಮ ಜನಪದ ಸಾಹಿತ್ಯದ ಶಿಶು ಪ್ರಾಸಗಳನ್ನು ಸುಂದರವಾಣಿ 'ಕಂದನ ಕವನಗಳು' ಎಂದು ಕರೆದಿರುವುದು ಸೂಕ್ತವಾಗಿದೆ. ಪುಟ್ಟ ಮಕ್ಕಳ ಮನಸ್ಸಿನ ಸೂಕ್ಷ್ಮ ಎಳೆಗಳ ಮಾತಿನ ಸಿಂಚನ ಕಂದನ ಕವನಗಳಾಗಿವೆ. ರಾಗೌ ಅವರ 'ಕಂದನ ಕವನಗಳು' ಪುಟಾಣಿಗಳ ಕಿರು ಹೊತ್ತಿಗೆಯಾಗಿದೆ. ಹೊಸ ಅಲೆಯ ತಿರುವಿನಲ್ಲಿ ಮಿಂಚುವ ಈ ಕಂದನ ಕವನಗಳು ಅಬ್ಬರವಿಲ್ಲದವು. ಕೆಲವು ಪ್ರಾಸಗಳಲ್ಲಿ ಗಂಭೀರ ಚಿಂತನೆಯ ಲೇಪವಿದೆ ಎಂದರೆ ಆಶ್ಚರ್ಯವಾಗಬಹುದು.

ಮಕ್ಕಳು ಮುಂದಿನ ಪ್ರಜೆಗಳು ರಾಷ್ಟ್ರ ಕಟ್ಟುವ ಧೀಮಂತರು, ರಾಷ್ಟ್ರದ ಮಾಣಿಕ್ಯ ಎಂದೆಲ್ಲ ಹೇಳುವ ನಾವುಗಳು ಎಷ್ಟರ ಮಟ್ಟಿಗೆ ಮಕ್ಕಳ ಮನೋವಿಕಾಸವನ್ನು ವಿಸ್ತರಿಸುವ ಪಠ್ಯಪುಸ್ತಕಗಳನ್ನು ಒದಗಿಸುತ್ತೇವೆ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಮಕ್ಕಳ ಸಾಹಿತ್ಯಕ್ಕೆ ಆದ್ಯತೆ ನೀಡಬೇಕು. ಅದರಲ್ಲಿ ಜೀವನದ ಉಸಿರಾದ ಜನಪದ ಶಿಶು ಪ್ರಾಸಕ್ಕೆ ಮೊದಲ ಮಣೆ ಹಾಕುವುದು ಔಚಿತ್ಯಪೂರ್ಣ ಮಕ್ಕಳಿಗೆ ಆಟದ ವಿನೋದದ ಮುಖಾಂತರ ಬೋಧಿಸುವುದರಿಂದ ಸುಲಭವಾಗಿ ಗ್ರಾಸವಾಗುತ್ತದೆ. ಈ ನಿಟ್ಟಿನಿಂದ ಜ್ಞಾನದ ಕೊರತೆಯನ್ನು ನೀಗಿಸಬಹುದು. ಹಾಸ್ಯದ ಹೊನಲ ಜೊತೆಯಲ್ಲಿ ಪ್ರಕೃತಿ ಪರಿಚಯವಾದಂತೆ, ಜನರ ಪರಿಚಯ, ಅನೇಕ ವಸ್ತುಗಳ ಪ್ರಾಣಿಗಳ ಪರಿಚಯ ಆಗುತ್ತದೆ. ಅಲ್ಲದೆ ಪ್ರಶ್ನಿಸುವ ದಿಟ್ಟತನ ಲಭ್ಯವಾಗುತ್ತದೆ, ಕಂದನ ಕವನಗಳಲ್ಲಿ ನೀತಿಯ ಬಿಗಿತವಿದ್ದು,

ಓದಿಸಿಕೊಳ್ಳುವ ಸೆಳೆತವಿದೆ. ಮಕ್ಕಳ ಸಾಹಿತ್ಯ ಕುಂಠಿತವಾಗುತ್ತಿರುವ ಈ ಹೊತ್ತಿನಲ್ಲಿ ಮಳೆಯಿಲ್ಲದ ಬವಣೆ ಪಡುತ್ತಿರುವ ರೈತನಿಗೆ ನಿರೀಕ್ಷೆಗೆ ಮೀರಿ ಮಳೆ ಬಂದಲ್ಲಿ ಆಗುವ ಸಂತಸದಂತೆ ಮಕ್ಕಳಿಗೆ ಕ್ರಿಯಾಶೀಲತೆಯನ್ನು ಹೊತ್ತು ತಂದ ಪೌಷ್ಠಿಕಾಂಶದ ಪೆಪ್ಪರ್‌ಮೆಂಟ್ ಈ ಕಂದನ ಕವನಗಳು.

ಮಕ್ಕಳ ಅನುಭವದ ಸತ್ಯದ ಮೂಸೆಯಲ್ಲಿ ಎರಕಹೊಯ್ದು ಆಭರಣಗಳು ಈ ನುಡಿಗಟ್ಟುಗಳು ಶಿಶುಪ್ರಾಸಗಳು ನಗೆಗಡಲಲ್ಲಿ ಅತಿಯಾಗಿ ಮೀಯಿಸುವುದರಿಂದ ಆರೋಗ್ಯವರ್ಧಿಸುತ್ತದೆ. ನಗು ಆರೋಗ್ಯದ ಸಂಕೇತ ಎಂಬುದು ಸರ್ವವಿಧಿತ. ಅಂಥ ಹಾಸ್ಯ ಲಾಸ್ಯದ ಪ್ರಯತ್ನವನ್ನು ಡಾ. ರಾಗೌ ಅವರು ಕಂದನ ಕವನಗಳಲ್ಲಿ ಮಗ್ಗುಲು ಮಗ್ಗುಲಾಗಿ ರೇಖಿಸಿದ್ದಾರೆ. ಸುಂದರವಾದ ದುಂಡು ಮಲ್ಲಿಗೆ ಜಡೆಯಂತಿರುವ 'ಕಂದನ ಕವನಗಳು' ಕಣ್ಣು ಮನಸ್ಸಿಗೆ ಮೋಹಕವಾಗಿ ಕಾಣುತ್ತದೆ.

'ಕುಮಾರರಾಮ' ಒಂದು ಐತಿಹಾಸಿಕ ಪುಟ್ಟ ಕೃತಿ. ಚರಿತ್ರೆಯನ್ನು ಮಕ್ಕಳಿಗೆ ಪರಿಚಯಿಸುವ ಪ್ರಯತ್ನದಲ್ಲಿ ಡಾ, ರಾಗೌ ಅವರು ಸಾಹಸ ಪ್ರಧಾನವಾದ ಕತೆಯನ್ನು ಆಯ್ದುಕೊಂಡಿರುವುದು ಮೆಚ್ಚಲರ್ಹವಾದುದು. ಈ ಮುಖಾಂತರ ಮಕ್ಕಳಿಗೆ ಇತಿಹಾಸದ ಒಂದು ಪ್ರಸಂಗವನ್ನು ಘಟನೆಗಳ ಸಹಿತವಾಗಿ ಅರುಹುತ್ತಾರೆ. ಆದರೆ ಇಂದಿನ ಮಕ್ಕಳಿಗೆ ನಾಲ್ಕು ಜನ ಪತ್ನಿಯರನ್ನು ಮದುವೆಯಾಗುವ ಬಗೆಗೆ ತಕ್ಷಣವೇ ಮರುಪ್ರಶ್ನೆ ಹಾಕುತ್ತಾರೆ. ಒಬ್ಬರಿಗೆ ಒಂದೇ ಮದುವೆ ತಾನೇ? ಏಕೆ ಹೀಗೆ? ಎಂದು ಪ್ರಶ್ನಿಸಬಹುದು. ಅಂದಿನ ಇತಿಹಾಸದ ಪುಟಗಳಲ್ಲಿ ಈ ಜೀವನ ಹಾಸುಹೊಕ್ಕಾಗಿತ್ತು ಎನ್ನುವಲ್ಲಿ ಪರಂಪರೆಯ ಎಷ್ಟೋ ಕಾಲದ ನಂತರ ಸುಧಾರಣೆಯಾಗಿದ್ದು ಕಾನೂನು ಭದ್ರವಾಗಿದೆ ಎಂಬುದನ್ನು ಈ ಮುಖಾಂತರ ಮಕ್ಕಳಿಗೆ ಸೋಂಕಿಲ್ಲದಂತೆ ತಿಳಿಸಬಹುದು.

ಹಾಗೆಯೇ ಚಿಕ್ಕಮ್ಮನ ವಿಕೃತ ಲೈಂಗಿಕ ಭಾವನೆ ಬಹುಶಃ ಕುಮಾರರಾಮನಿಗೆ ನುಂಗಲಾರದ ತುತ್ತಾಗುತ್ತದೆ. ಅಂತೆಯೇ ಮಕ್ಕಳಿಗೆ ಇದು ಅರ್ಥವಾಗಲು ಕಷ್ಟವಾಗಬಹುದು. ಒಟ್ಟಿನಲ್ಲಿ ಸಾಹಸದ ಹಿನ್ನೆಲೆಯಲ್ಲಿ ತುಂಟ ಕುದುರೆಯನ್ನು ಪಳಗಿಸುವ ಧೀರನಾಗಿ ಕುಮಾರರಾಮ ಮಿಂಚುವುದು, ಯುದ್ಧ ಸಂದರ್ಭದಲ್ಲಿ ಶತ್ರುಗಳನ್ನು ಸೋಲಿಸಿ ಜಯಶೀಲನಾಗುವುದು. ರಾಷ್ಟ್ರ ಪ್ರೇಮವನ್ನು ಬಿತ್ತುವ ಕುಮಾರಾಮನ ಶೌರ್ಯ ಪರಾಕ್ರಮ ಮಕ್ಕಳಿಗೆ ಆದರ್ಶ ಪ್ರಾಯವಾಗಿ ತೋರುತ್ತದೆ. ಅನುಸರಿಸಲು ಯೋಗ್ಯವಾದ ಪರನಾರಿ ಸೋದರ ನೀತಿಯು ಕೂಡ ಮಕ್ಕಳಿಗೆ ಉತ್ತಮ ಪ್ರೇರಣೆಯನ್ನು ನೀಡುವಲ್ಲಿ ಯಶಸ್ಸುಕಂಡಿದೆ.

ಮಕ್ಕಳ ಮನವನ್ನು ಆಕರ್ಷಿಸಬಲ್ಲ ಹಾಗೂ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ ಪದ ಪಂಕ್ತಿ ಪ್ರಯೋಗಗೊಂಡಿವೆ. ಉದಾಹರಣೆಗೆ ಕುಮಾರರಾಮನ ಕೃತಿಯಲ್ಲಿ.

"ಕಂಪಿಲಿ ಎಂಬುದು ಒಂದು ರಾಜ್ಯ ಅದನ್ನು ಕಂಪಿಲರಾಯ ಎಂಬುವನು ಆಳುತ್ತಿದ್ದನು. ಅವನ ಕೀರ್ತಿ ಎಲ್ಲ ಕಡೆಯೂ ಹರಡಿತ್ತು. ಅವನ ಹೆಸರನ್ನು ಕೇಳಿದರೆ ಸಾಕು ಶತ್ರುಗಳು ಹೆದರುತ್ತಿದ್ದರು. 'ಕರ್ನಾಟಕ ಪತಿ' ಎಂದೇ ಅವನು ಪ್ರಸಿದ್ಧನಾಗಿದ್ದನು. ಇವನಿಗೆ ಹರಿಹರ ದೇವಿ ಎಂಬುವಳು ಪಟ್ಟದರಾಣಿ. ಬೈಚಪ್ಪ ಎಂಬುವನು ಮಂತ್ರಿಯಾಗಿದ್ದನು. ಅವನು ಹಲವಾರು ರಾಜ್ಯಗಳನ್ನು ಗೆದ್ದು ವಿಜಯ ಸಾರಿದ್ದನು. ಹೀಗೆ ತುಂಬು ಜೀವನದ ವೈಭವದಿಂದ ರಾಜ್ಯವಾಳುತ್ತಿದ್ದನು ಕಪಿಲರಾಯ."

ಈ ಖಂಡಿಕೆಯಲ್ಲಿ ಚಿಕ್ಕ-ಚಿಕ್ಕ ವಾಕ್ಯಗಳಿದ್ದು, ಕಠಿಣ ಪದಗಳಿಲ್ಲ. ಇಡಿ ಕೃತಿಯೇ ಸರಳವಾಗಿದ್ದು, ಮಕ್ಕಳ ಮನಸ್ಸನ್ನು ಆಕರ್ಷಿಸುವುದರಲ್ಲಿ ಸಂಶಯವಿಲ್ಲ.

ಹೀಗೆ 'ಕುಮಾರರಾಮ ಶೌರ್ಯ ಗುಣ ಮಕ್ಕಳ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಮಕ್ಕಳ ಮನಸ್ಸಿನಾಳದಲ್ಲಿ ಶೌರ್ಯವನ್ನು ಬಿತ್ತುವ 'ಕುಮಾರ ರಾಮ'ನನ್ನು ಸರಳವಾದ

ಭಾಷೆಯಲ್ಲಿ ಮಕ್ಕಳ ಸಾಹಿತ್ಯ ಲೋಕಕ್ಕೆ ನೀಡಿದ ಡಾ. ರಾಗೌ ಅವರು ಶ್ಲಾಘನೀಯರು.

'ಆರು ಪ್ರಾಣಿ ಕಥೆಗಳು' ಡಾ. ರಾಗೌ ಅವರು ಮಕ್ಕಳಿಗಾಗಿ ರಚಿಸಿದ ಕಥೆಗಳು ಪ್ರೋ ರಾಗೌ ಹಾಗೂ ಅನೇಕ ವಿದ್ವಾಂಸರು ಹೇಳುವಂತೆ ಜನಪದ ಕಥೆಗಳಲ್ಲೆ ಅತ್ಯಂತ ಪ್ರಾಚೀನ ಪ್ರಕಾರವೆಂದರೆ ಪ್ರಾಣಿಕಥೆಗಳು ಮಾನವನ ನಾಗರೀಕತೆಯ ಪೂರ್ವಸ್ಥಿತಿಯ ಸೃಷ್ಟಿ ಇದೆಂಬುದು ಕೆಲವರ ಮತ.

ಮಕ್ಕಳ ಮೇಲೆ ಬಹುಬೇಗ ಪರಿಣಾಮವನ್ನು ಬೀರುವ ಕಥೆಗಳೆಂದರೆ ಪ್ರಾಣಿಗಳಿಗೆ ಸಂಬಂಧಿಸಿದವು ರಾಗೌ ಅವರು ಅವರ 'ಕರ್ನಾಟಕ ಜನಪದ ಕಥೆಗಳು' ಸಂಕಲನದಿಂದ 'ಆರು ಪ್ರಾಣಿ ಕಥೆಗಳನ್ನು ಆಯ್ದುಕೊಂಡಿದ್ದಾರೆ. ಪ್ರಸ್ತಾವನೆಯಲ್ಲಿ ಜನಪದ ಕಥೆಗಳ ಕುರಿತಂತೆ ಸುದೀರ್ಘವಾದ ವಿವರಣೆಯನ್ನು ಮೌಲಿಕವಾಗಿ ಸಮಗ್ರ ಚಿಂತನೆಯ ಹೊಳಹಿನಿಂದ ನೀಡಿದ್ದಾರೆ.

'ಮೋಟು ಬಾಲದ ಕೋತಿ' ಗಮನಾರ್ಹವಾಗಿದೆ. ಈ ಕಥೆಯಲ್ಲಿ ಕೋತಿಯು ತನ್ನ ಚುರುಕು ಬುದ್ಧಿಯಿಂದ ಅನೇಕ ವ್ಯಕ್ತಿಗಳಿಂದ ವಿವಿಧ ವಸ್ತುಗಳನ್ನು ಪಡೆದು ಕೊನೆಯಲ್ಲಿ ಪದ್ಯ ರೂಪದಲ್ಲಿ ಘಟನಾವಳಿಯ ರೂಪಗಳನ್ನು

"ಬಾಲ ಹೋಯ್ತು ಕತ್ತಿ ಬಂತು ಡುಂಡುಂ
ಕತ್ತಿ ಹೋಯ್ತು ಹುಲ್ಲು ಬಂತು ಡುಂಡುಂ
..........................................................
ಹೆಂಡತಿ ಹೋದ್ಲು ಡೋಲ್ ಬಂತು ಡುಂಡುಂ
ಡುಂಡುಂ ಡುಂಡುಂ"

ಹೀಗೆ ಹಾಡುವ ಶೈಲಿ ಮಕ್ಕಳಿಗೆ ರಂಜನೀಯವಾಗಿ ಮನಸ್ಸಿಗೆ ಮುದ ನೀಡುತ್ತದೆ.

'ಚುರುಕು ಬುದ್ಧಿಯ ಅಳಿಲು' ಕಥೆಯಲ್ಲಿ ಅಳಿಲು ಪುಟ್ಟದಾದರೂ ಅದು ಮನಸ್ಸು ಮಾಡಿ ಶ್ರಮದಿಂದ ಕಾರ್ಯ ನಿರ್ವಹಿಸಿದ್ದಕ್ಕಾಗಿ ಕಡೆಗಣ್ಣಿಂದ ನೋಡುತ್ತಿದ್ದ ರಾಜನಾದ ತಂದೆಯಿಂದ ರಾಜ್ಯವನ್ನು ಪಡೆದು ಬುದ್ದಿವಂತಿಕೆಯನ್ನು ಮರೆಯುವ ಈ ಕಥೆ ಮಕ್ಕಳಿಗೆ ಮೆಚ್ಚುಗೆಯಾಗುತ್ತದೆ.

'ಪೂಜಾರಿ ಮತ್ತು ಸರ್ಪ' ಕಥೆ ಹಾವುಗಳ ಅಕ್ರಮ ಸಂಬಂಧದ ಕುರಿತಾಗಿದೆ. 'ಜಾಣಕೋತಿ' ಕಥೆಯಲ್ಲಿ ಕೋತಿಯ ಬುದ್ಧಿವಂತಿಕೆ ಮತ್ತೊಂದು ಕೋನದಿಂದ ಎದ್ದು ಕಾಣುತ್ತದೆ. ' ಕತ್ತೆಮರಿ' ಕಥೆಯ ವಿಶೇಷವೆಂದರೆ ಮುಸುಕು ತೆಗೆದರೆ ಮನುಷ್ಯನಾಗುವ ಮಾಯಾವಂತಿಕೆಯಲ್ಲಿ ಮಕ್ಕಳಿಗೆ ರಂಜನೆ ದೊರೆಯುವುದಲ್ಲದೆ ಕುತೂಹಲವೂ ಹೆಚ್ಚುತ್ತದೆ. 'ಮೇಜರ್ ಮೇಜಣ್ಣ ಗಡ್ಡದ ರಾಮೇಗೌಡ' ಎಂಬ ಕಥೆಯಲ್ಲಿ ಉಪಾಯವಂತ ನರಿ ಹೇಗೆ ತನ್ನ ಬುದ್ಧಿ ಶಕ್ತಿಯಿಂದ ಅಪಾಯದಿಂದ ಪಾರಾಗುತ್ತದೆ. ಎಂಬ ವಿಸ್ಮಯ ಖಂಡಿತವಾಗಿಯೂ ಮಕ್ಕಳಿಗೆ ಖುಷಿಯನ್ನು ಕೊಡುತ್ತದೆ. ಹಾಗೆಯೇ ಸಮಯಕ್ಕೆ ಸರಿಯಾಗಿ ಹೇಗೆ ಜಾಣರಾಗಬೇಕು ಎನ್ನುವ ಹುಷಾರಿ ಗುಣವನ್ನು ಕಲಿಸುತ್ತದೆ.

'ಕುದುರೆ ಮತ್ತು ಹುಡುಗ' ಕಥೆಯಲ್ಲಿ ಚಿಕ್ಕಮ್ಮ ಹುಡುಗನಿಗೆ ವಿಷ ಹಾಕಿದ್ದನ್ನು ಸಾಕಿದ ಕುದುರೆ ತಿಳಿಸಿ ತಮ್ಮನ್ನು ಸಾಕಿದ ಹುಡುಗನನ್ನು ಕುತ್ತಿನಿಂದ ಪಾರುಮಾಡುತ್ತದೆ. ಕುದುರೆ ವಿಪತ್ತಿಗೆ ಸಿಕ್ಕಿಕೊಂಡಾಗ ಹುಡುಗ ಕುದುರೆಯನ್ನು ಪಾರುಮಾಡುತ್ತಾನೆ. ಇಲ್ಲಿ ನೀತಿ ನಿಯತ್ತಿಗೆ ಯಾವತ್ತು ಬೆಲೆಯಿರುತ್ತದೆ ಎಂಬ ಸಂದೇಶವಿದೆ.

'ಅತ್ತಿಗೆ ನಾದಿನಿ' ಕಥೆಯಲ್ಲಿ ಮನುಷ್ಯ ಸಹಜವಾದ ಅಸೂಯೆಯೊಂದಿಗೆ ನಡೆಯುವ ದುರಂತ ಚಿತ್ರಣವಿದೆ. ಅತ್ತಿಗೆಯರು ನಾದಿನಿಯನ್ನು ಮಾಂಸಾಹಾರಿ ಬೆಕ್ಕಿನ ಜೊತೆ ಕರಿಮೀನು ಇಟ್ಟು ಕೂಡಿ ಹಾಕುವ ಕ್ರೌರ್ಯ ಪ್ರವೃತ್ತಿಯಿಂದಾಗಿ ಆ ಹೆಣ್ಣು ಮಗಳು

ಸಂಕಟದಿಂದ ಒದ್ದಾಡುತ್ತಾಳೆ ಆಗ ಹುಲಿ ಹುಡುಗಿಯ ಸಹಾಯಕ್ಕೆ ಬರುತ್ತದೆ. ಮನುಷ್ಯರಾದವರು ಕ್ರೂರ ಪ್ರಾಣಿಯಂತೆ ವರ್ತಿಸುವ ಪರಿಯನ್ನು ಕಾಣುತ್ತೇವೆ. ಮಾನವ ಲೋಕದ ಕೃತ್ರಿಮತೆಯ ತೆರೆ ಎಳೆಯಲು ಪ್ರಯತ್ನ ಪಟ್ಟಿರುವ ಡಾ.ರಾಗೌ ಸಂಗ್ರಹಿಸಿರುವ ' ಪ್ರಾಣಿ ಕಥೆಗಳು' ಕೆಲವಾದರೂ ಮಕ್ಕಳಿಗೆ ಉಪಯುಕ್ತವಾಗಿದೆ ಎನ್ನುವಲ್ಲಿ ಸಂಶಯವಿಲ್ಲ.

ಮಕ್ಕಳ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿದ್ದು ನೀತಿ ಬೋಧನೆಯನ್ನು ಮೈಗೂಡಿಸಿಕೊಂಡಿರುವ 'ಪ್ರಾಣಿ ಕಥೆಗಳು' ಮಕ್ಕಳ ಬೌದ್ಧಿಕ ಮಟ್ಟವನ್ನು ಹೆಚ್ಚಿಸುವಲ್ಲಿ ಪ್ರಾಣಿಗಳ ಸಚಿತ್ರ ಪರಿಚಯ ಮಾಡಿ ಕೊಡುವಲ್ಲಿ ಸಹಕಾರಿಯಾಗಿವೆ. ಇಂತಹ ಕಥೆಗಳನ್ನು ಸಂಗ್ರಹಿಸಿ ಮಕ್ಕಳಿಗಾಗಿ ನೀಡಿರುವ ಡಾ.ರಾಗೌ ಅವರ ಕಾರ್ಯ ಸಾರ್ಥಕವಾದುದು.

---

## ಅಡಿ ಟಿಪ್ಪಣಿ

೧-೧. ಕುಮಾರರಾಮ, ಡಾ.ರಾಗೌ, ಚಿತ್ರಭಾನುಪ್ರಕಾಶನ. ೧೯೯೨ ಪುಟ ೩

# ಉಪಸಂಹಾರ

ಕನ್ನಡ ವಿದ್ವತ್ ಲೋಕದಲ್ಲೆಂತೋ ಸಾಹಿತ್ಯಲೋಕದಲ್ಲೂ ಅಂತೆಯೇ ಮಹತ್ವದ ಹೆಸರು ಮಾಡಿರುವ ಡಾ.ರಾಮೇಗೌಡರು (ರಾಗೌ) ಬಹುಮುಖ ಪ್ರತಿಭೆಯ ಧೀಮಂತರು ಯಾವುದೇ ಸದ್ದುಗದ್ದಲಗಳಿಲ್ಲದೆ, ಅಬ್ಬರ ಆರ್ಭಟಗಳಿಲ್ಲದೆ ಪ್ರಚಾರದ ಬಡಿವಾರವಿಲ್ಲದೆ ತಮ್ಮಷ್ಟಕ್ಕೆ ತಾವು ಓರ್ವ ವ್ರತ ನಿಷ್ಠ ಸಾಧಕನಂತೆ ಸದಾ ಚಿಂತನ ಮಂಥನದಲ್ಲಿ ಮಗ್ನರಾಗಿ ಸಾಹಿತ್ಯ ಸೃಷ್ಟಿ ಕ್ರಿಯೆಯಲ್ಲಿ ತೊಡಗಿಸಿ ಕೊಂಡಿರುವ ರಾಗೌ ಸಾಹಿತ್ಯ ಲೋಕದ ತಪಸ್ವಿ.

ಶಾಸ್ತ್ರ, ಕಾವ್ಯಗಳೆರಡರಲ್ಲೂ ಸಮಾನ ಪ್ರತಿಭೆ, ಆಸಕ್ತಿಯನ್ನು ಹೊಂದಿರುವ ಅವರು ಜಾನಪದ ಕ್ಷೇತ್ರದಲ್ಲೂ ಅವಿರತವಾಗಿ ದುಡಿಯುತ್ತಾ ಬಂದವರು ಗಂಭೀರ ಚಿಂತನೆಯ ವಿಚಾರವಂತಿಕೆ, ಸರಳತೆಯಿಂದ ಕೂಡಿದ ಸಜ್ಜನಿಕೆ, ಅನುಭವ ಪಕ್ವತೆಯಿಂದ ಕೂಡಿದ ಕಾವ್ಯ ಸೂಕ್ಷ್ಮತೆ ಅವರ ಸಾಹಿತ್ಯದ ವಿಶೇಷ ಗುಣವೆಂದು ತೋರುತ್ತದೆ.

ಅವರ ವ್ಯಕ್ತಿತ್ವ ಕೂಡ ಮಾದರಿಯಾದುದು. ರಾಗೌ ಅವರದು ಕಾವ್ಯ ಸತ್ವವನ್ನೇ ಪ್ರಧಾನ ಕಾಳಜಿಯಾಗಿ ದುಡಿಸಿಕೊಂಡ ಸೃಜನಶೀಲ ಪ್ರತಿಭೆ ಸಾಹಿತ್ಯದ ಯಾವುದೇ ಮಜಲಿಗೆ ಅಂಟಿಕೊಳ್ಳದೆ ಸಾಹಿತ್ಯಾಂದೋಲನಗಳಿಗೆ ಸೊಪ್ಪು ಹಾಕದೆ ಬದುಕಿನ ಅಂತಃಸ್ವತವನ್ನು ಕಾವ್ಯವಾಗಿಸಿದವರು ಇದರಿಂದಲೇ ಅವಿರತವಾಗಿ ಅವರ ಅಭಿವ್ಯಕ್ತಿಯಲ್ಲಿ ಯುಗವ್ರಾಸವ ಮಾನವೀಯತೆಗಳೆರಡೂ ಮೇಳೈಸಿರುವುದು ಮೂರುವರೆ ದಶಕಗಳಿಂದ ನಡೆದು ಬಂದಿರುವ ಅವರ ಸಾಹಿತ್ಯ ಕೃಷಿ ನಲವತ್ತೈದು ಮೌಲಿಕ ಕೃತಿಗಳನ್ನು ಸೃಜಿಸಿದೆ. ಕೃತಕತೆ ಇರದ ಅದ್ಭುತ ಸೃಜನಶೀಲ ಚೈತನ್ಯ ಎಂಬುದನ್ನು ಸಾಕಾರಗೊಳಿಸಿದೆ.

ಈ ನಿಬಂಧದಲ್ಲಿ ಚರ್ಚಿಸಿರುವ ರಾಗೌ ಬದುಕುಬರಹ ಅವುಗಳ ಅಧ್ಯಯನ ಸಂದರ್ಭದಲ್ಲಿ ಲಕ್ಷಿಸಬೇಕಾದ ಸಂಗತಿಗಳು ಈ ಕೆಳಕಂಡಂತಿದೆ.

ಡಾ. ರಾಗೌ ಅವರು ವ್ಯಕ್ತಿತ್ವದಿಂದ ಸರಳ ಸಜ್ಜನರು ಅಧ್ಯಾಪಕತನದ ಮೌಲ್ಯಗಳ ಅನುಷ್ಠಾನಕ್ಕೆ ಡಾ.ರಾಗೌ ಉತ್ತಮ ನಿದರ್ಶನ. ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಿದವರಾದರೂ ಜಾನಪದ ಅವರಿಗೆ ಒಲಿದ ಕ್ಷೇತ್ರ. ಶಿಷ್ಟ ಸಾಹಿತ್ಯದಷ್ಟೆ ಅಸ್ಥೆಯಿಂದ ಜಾನಪದ ವಿಷಯವನ್ನು ಅಧ್ಯಯನ ಮಾಡಿದ್ದಾರೆ. ನಮ್ಮ ಗಾದೆಗಳು, ಜನಪದ ನಂಬಿಕೆಗಳು, ಕಿಟೆಲ್ ಕೋಶದ ಗಾದೆಗಳು, ಜನಪದ ರಾಮಾಯಣಗಳು ಕ್ಷೇತ್ರಕಾರ್ಯದ ಮೂಲಕ ವೈಜ್ಞಾನಿಕವಾಗಿ ಸಂಗ್ರಹಿಸಿರುವ ಜಾನಪದ ಕೃತಿಗಳು ಈ ಕೃತಿಗಳಿಗೆ ಬರೆದಿರುವ ಸುದೀರ್ಘ ಪ್ರಸ್ತಾವನೆ, ಪಾರಿಭಾಷಿಕ ಶಬ್ದಕೋಶ ಅವರ ಜಾನಪದ ಆಸಕ್ತಿ ಹಾಗೂ ವಿದ್ವತ್ತಿಗೆ ಸಾಕ್ಷಿಯಾಗಿವೆ.

ರಾಘವಾಂಕ, ಕಾವ್ಯಾನುಶೀಲನ, ಅವಗಾಹನ, ದುರ್ಗಸಿಂಹ ಮೊದಲಾದವು ಅವರ ಆಳವಾದ ಅಧ್ಯಯನದ ಪ್ರತಿರೂಪಗಳಾಗಿ ಬಂದಿರುವ ವಿಮರ್ಶಾ ಕೃತಿಗಳು. ಇವು ರಾಗೌ ಅವರ ವಸ್ತುನಿಷ್ಠವಾಗಿ ಅವಲೋಕಿಸಿದರ ಫಲವಾಗಿದೆ. ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು ಕರ್ನಾಟಕದ ಇತಿಹಾಸ ಹಾಗೂ ಸಾಹಿತ್ಯ ಸಂಸ್ಕೃತಿಯನ್ನು ಸಮರ್ಥಿಸುವ ವಿಶ್ಲೇಷಣೆ, ರಸ ವಿಮರ್ಶೆಯ ಮೂಲಕ ಇತಿಹಾಸವನ್ನು ಕಟ್ಟಿಕೊಡುವ ಕೆಲಸ ಅದಾಗಿದೆ. ಡಾ.ರಾಗೌ ಅವರ ಸೃಜನಶೀಲ ಪ್ರತಿಭೆಯ ಪ್ರಾತಿನಿಧಿಕ ರೂಪ ಕಾವ್ಯ ಸ್ವಾನುಭವದ ಸಿಂಚನವೇ ಪ್ರಧಾನವಾಗಿದ್ದು, ಸಮಾಜ ಮುಖಿಯಾಗಿ ಸಂಕೀರ್ಣಗೊಳ್ಳುವುದಕ್ಕೆ ಬದಲಾಗಿ ವೈಯಕ್ತಿಕ ಬದುಕಿನ ಸತ್ಯಶೋಧನೆಯ ಚಿಕಿತ್ಸಕ ಭಾವವನ್ನು ಹೊಂದಿದೆ.

ಡಾ॥ ರಾಗೌ ಅವರ ನಡೆ, ನುಡಿ, ಆಲೋಚನೆ, ಅಭಿವ್ಯಕ್ತಿಗಳಲ್ಲಿ ಸ್ವಂತಿಕೆ ಇದೆ. ಮಹದಾಶಯವಿದೆ. ಮಾನವೀಯತೆಯಿದೆ. ಮಾನವನ ಮೂಲಭೂತ ಗುಣಗಳನ್ನು ಉಳಿಸಿಕೊಂಡು ಅನುಭವ ಮೂಲದ ಹಿತವನ್ನು ಹೇಳುವ ಇಚ್ಛೆ ಯಾವುದೇ ಸಾಹಿತ್ಯಕ ಚಳವಳಿಗಾದರೂ ಆದರ್ಶವಾಗಿರಬೇಕು ಅದೊಂದಿದ್ದರೆ ನಿರ್ದಿಷ್ಟ ಚಳವಳಿಗೇ ಸೇರಿದವರೆಂಬ ಪಟ್ಟ ಕಟ್ಟುವ ಅವಶ್ಯಕತೆ ಇರುವುದಿಲ್ಲ. ನವೋದಯದ ಲಯಾತ್ಮಕತೆ, ನವ್ಯದ ಚಿಂತನೆ,

ಬಂಡಾಯದ ಮಂಥನ, ಆಧುನಿಕೋತ್ತರದ ಸ್ವಚ್ಛಂದ ಅಭಿವ್ಯಕ್ತಿ ಇವೆಲ್ಲವುಗಳ ಸಮ್ಮಿಲನ ರಾಗೌ ಅವರ ಕಾವ್ಯ. ಗಗನದಲ್ಲಿ ಹಕ್ಕಿಗಳ ಹಾರಾಟ ಸಾಗುತ್ತಲೇ ಇರುತ್ತದೆ. ಮೋಡ ಮುಸುಕಿದ ಆಕಾಶದಲ್ಲೂ ಸೂರ್ಯ ತನ್ನ ಕೆಲಸವನ್ನು ತಾನು ಮಾಡುತ್ತಲೇ ಇರುತ್ತಾನೆ. ನೆಲಮುಗಿಲುಗಳ ನಡುವೆ ಕ್ರಿಯಾತ್ಮಕತೆಗೆ ಯಾವುದೇ ಆಚರಣೆಯಿಲ್ಲ. ಸೃಜನಶೀಲ ಗುಣ ಮನುಷ್ಯನ ಮಾರ್ಗವನ್ನು ಸುಗಮಗೊಳಿಸುತ್ತಲೇ ಇರುತ್ತದೆ. ಅಂಥ ಸಫಲವಾದುದರ ಸಂಕೇತವೇ ರಾಗೌ ಅವರ ಕವನ ಸಂಕಲನ.

ಗ್ರಂಥ ಸಂಪಾದನೆಯಲ್ಲಿ ಡಾ.ರಾಗೌ ಅವರು ಸಿದ್ಧಹಸ್ತರು. ಅವರು ಸಂಪಾದಿಸಿರುವ ರನ್ನನ ಸಾಹಸಭೀಮವಿಜಯ, ಅಜಿತತೀರ್ಥಂಕರ ಪುರಾಣ, ಲಕ್ಷ್ಮೀಶನ ಜೈಮಿನಿಭಾರತ ಗ್ರಂಥಗಳು ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದಿದೆ. ಇವುಗಳು ಸಂಪಾದನಾ ಕ್ರಮದ ಶಿಸ್ತು ಎದ್ದು ಕಾಣುವ ಕೆಲಸವಾಗಿದೆ. 'ದೊರೆ ದುರ್ಯೋಧನ' ನಾಟಕ ವಿಶಿಷ್ಟ ಬಗೆಯದು. ಮಹಾಭಾರತದ ಕಥಾ ವಸ್ತುವಾದರೂ ಅದನ್ನು ಸಂಬಾಳಿಸುವಲ್ಲಿ ಹೊಸತನವಿದೆ. ಕನ್ನಡ ರನ್ನನ ಗದಾಯುದ್ಧದ ಪ್ರಭಾವ ಇರುವಂತೆ ತೋರಿದರೂ ನಿರ್ವಹಣೆಯಲ್ಲಿ ತೋರಿಸುವ ಪ್ರತಿಭೆ ಅನನ್ಯವಾದುದು.

ರಾಗೌ ಅವರು ಒಬ್ಬ ಶ್ರಮ ಜೀವಿ. ಅವರ ವಿದ್ವತ್ ಸ್ವಂತ ಶ್ರಮದಿಂದ ಪಡೆದದ್ದು. ಕನ್ನಡ ಸಾಹಿತ್ಯ ಮತ್ತು ಜನಪದ ಕ್ಷೇತ್ರದಲ್ಲಿ ಬಹುಕಾಲ ನಿಲ್ಲುವಂತ ಸಾಧನೆ ಮಾಡಿದ್ದಾರೆ. ಒಂದೇ ರೀತಿಯ ಶಿಸ್ತು, ಹಲವು ಶಕ್ತಿ, ಹಲವು ಆಸಕ್ತಿ ಹೆಚ್ಚಿನದಾಗಿ ಹಲವು ಸಾಮಾಜಿಕ ನೆಲೆ ಹಿನ್ನೆಲೆಗಳ ವಿದ್ವಾಂಸರ ವಿದ್ಯಾರಣ್ಯರಲ್ಲಿ ತಪ್ಪದೇ ಹೆಸರಿಸಬೇಕಾದವರು ಪ್ರೋ. ರಾಗೌ. ಸೃಜನಶೀಲ ಪ್ರತಿಭೆಯನ್ನು ಕಾಣುವ ಕಟ್ಟುವ ಎರಡು ನೆಲೆಗಳಲ್ಲಿ ಜರುಗುವ ಕ್ರಿಯೆಯಾಗಿರುವುದೆಂಬ ಸತ್ಯದ ಬೆಳಕಿನಲ್ಲಿ ಹೇಳುವುದಾದರೆ, ರಾಗೌ ಅವರನ್ನು ಸೃಜನ ಸಂಶೋಧಕ, ಸೃಜನ ವಿಮರ್ಶಕರೆಂದು ಕರೆಯಬೇಕಾಗುತ್ತದೆ.

ಡಾ.ರಾಗೌ ಒಬ್ಬ ವ್ಯಕ್ತಿಯಾಗಿ ಅಷ್ಟೇ ಅಲ್ಲ, ಸಾಹಿತ್ಯಧ್ಯಾಯಿಯಾಗಿ, ಅಧ್ಯಾಪಕರಾಗಿ, ಲೇಖಕರಾಗಿ, ಸಾಹಿತಿಯಾಗಿ ಒಳ್ಳೆಯ ಚಿಂತಕರಾಗಿ ಹೆಸರು ಮಾಡಿದವರು ಇಂತಹ ವಿಶೇಷ ವ್ಯಕ್ತಿಯ ಬಗ್ಗೆ ಪರಿಚಯವನ್ನು ಮಾಡುವಲ್ಲಿ ನಾನು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದೇನೆ. ಇಲ್ಲಿ ನೋಡಿರುವ ನನ್ನ ಎಲ್ಲಾ ದೃಷ್ಟಿಕೋನವು ಪರಿಪೂರ್ಣವೆಂದು ಭಾವಿಸಲಾಗದು. ಇಂತಹ ಅದ್ವಿತೀಯ ಸಾಹಿತಿಯನ್ನು ಕುರಿತು ಆಸಕ್ತರು ಹೆಚ್ಚು ಅಧ್ಯಯನಶೀಲರಾಗಲಿ ಎಂದು ಬಯಸುತ್ತೇನೆ.

# ಗ್ರಂಥಋಣ


* ಅಭಿಜಾತ (ಅಭಿನಂದನ ಗ್ರಂಥ)

ಸಂಪಾದಕರು. ಕ್ಯಾತನಹಳ್ಳಿ ರಾಮಣ್ಣ, ಡಾ.ಎ.ರಂಗಸ್ವಾಮಿ.

ಡಾ.ಬೋರೇಗೌಡ ಚಿಕ್ಕಮರಳಿ.

ಸಂವಹನ ಪ್ರಕಾಶನ, ೨೦೦೬.

* ಕುಮಾರರಾಮ

ಡಾ.ರಾಗೌ

ಚಿತ್ರಭಾನು ಪ್ರಕಾಶನ ೧೯೯೨.

* ಜನಪದ ಸಾಹಿತ್ಯ ರೂಪಗಳು

ಡಾ.ರಾಗೌ

ಸಂವಹನ ಪ್ರಕಾಶನ, ೧೯೯೬.

* ಡಾ.ರಾಗೌ ವ್ಯಕ್ತಿ ಅಭಿವ್ಯಕ್ತಿ

ಡಾ.ಬೋರೇಗೌಡ ಚಿಕ್ಕಮರಳಿ

ಅವಿನಾಶ್ ಪ್ರಕಾಶನ, ೨೦೦೯

* ದೊರೆ ದುರ್ಯೋಧನ

ಡಾ.ರಾಗೌ

ಸಂವಹನ ಪ್ರಕಾಶನ, ೧೯೯೯

* ನಮ್ಮ ಒಗಟುಗಳು

ಡಾ.ರಾಗೌ

ಡಿ.ವಿ.ಕೆ. ಮೂರ್ತಿ ಪ್ರಕಾಶನ, ೧೯೯೬.

* ನಮ್ಮ ಗಾದೆಗಳು

  ಡಾ.ರಾಗೌ

  ಗೀತಾ ಬುಕ್ ಹೌಸ್. ೧೯೯೪.

* ಪುಣ್ಯಕೋಟಿ

  ಸಂಪಾದರು ಜಿ.ಟಿ.ವೀರಪ್ಪ,

  ೧೯೯೫.

* ರಾಘವಾಂಕ

  ಡಾ.ರಾಗೌ

  ಮೈಸೂರು ಪ್ರಸಾರಂಗ. ೧೯೯೭.

# ಅನುಬಂಧ

## ರಾಗೌ ಕೃತಿಗಳು

**ಕಾವ್ಯ**

೧. ಯಾತ್ರೆ (೧೯೬೬)

೨. ತೆಪ್ಪ (೧೯೬೨)

೩. ಮೋಡ ಮುಸುಕಿದ ಆಕಾಶ (೧೯೯೬)

೪. ನೆಲದ ಮರೆಯ ನಿಧಾನ (೧೯೯೯)

೫. ಮಾತು ಮೌನಗಳ ನಡುವೆ (೨೦೦೧)

೬. ಆರದಿರಲಿ ಈ ಬೆಳಕು (೨೦೦೨)

೭. ಮಾತು ಮಾರ್ಗ (೨೦೦೨)

೮. ನಿನ್ನೆ ನಾಳೆಗಳ ನಡುವೆ (ಸಮಗ್ರ ಕಾವ್ಯ – ೨೦೦೨)

೯. ಅನೀಲ ಅರಾಧನಾ (ಸಂಯುಕ್ತ ಕಾವ್ಯ – ಇತರರೊಡನೆ–೨೦೦೨)

೧೦. ಅನಾಗತ (೨೦೦೭)

**ನಾಟಕ**

೧೧. ದೊರೆ ದುರ್ಯೋಧನ (೧೯೯೭)

**ಸಾಹಿತ್ಯ ವಿಮರ್ಶೆ**

೧೨. ರಾಘವಾಂಕ (೧೯೯೭)

೧೩. ಕಾವ್ಯಾನುಶೀಲನ (೧೯೬೮)

೧೪. ಅವಗಾಹನ (೧೯೭೫)

೧೫. ಕುವೆಂಪು ಸಾಹಿತ್ಯ ವಿಮರ್ಶನ (೧೯೭೮)

೧೬. ದುರ್ಗಸಿಂಹ (೧೯೮೩)

೧೭. ಪ್ರಾಸ್ತಾವಿಕ (೧೯೮೪)

೧೮. ಸಮಾಕೀರ್ಣ (೧೯೯೧)

೧೯. ಕೆ.ಎಸ್.ನರಸಿಂಹಸ್ವಾಮಿ (೨೦೦೨)

೨೦. ಬಿ.ಎಂ.ಶ್ರೀಕಂಠಯ್ಯ (೨೦೦೭)

೨೧. ಪ್ರಾಚೀನ ಕಾವ್ಯ ಚಿಂತನ (೨೦೦೭)

**ಸಂಶೋಧನ ಮಹಾಪ್ರಬಂಧ**

೨೨. ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು (೧೯೯೨)

**ಗ್ರಂಥ ಸಂಪಾದನೆ**

೨೩. ಸಾಹಸಭೀಮ ವಿಜಯಂ (ಇತರರೊಡನೆ – ೧೯೮೫)

೨೪. ಅಜಿತತೀರ್ಥಕರ ಪುರಾಣಂ (ಇತರರೊಡನೆ – ೧೯೮೮)

೨೫. ಲಕ್ಷ್ಮೀಶನ ಜೈಮಿನಿಭಾರತ (ಇತರರೊಡನೆ – ೧೯೯೩)

೨೬. ಸರ್ವಜ್ಞನ ವಚನಗಳು (೨೦೦೩)

**ಜಾನಪದ**

೨೭. ನಮ್ಮ ಗಾದೆಗಳು (೧೯೬೮)

೨೮. ಕಿಟ್ಟೆಲ್ ಕೋಶದ ಗಾದೆಗಳು (೧೯೬೯)

೨೯. ಕರ್ಣಾಟಕ ಜನಪದ ಕಥೆಗಳು (೧೯೬೯)

೩೦. ನಮ್ಮ ಒಗಟುಗಳು (೧೯೭೦)

೩೧. ಜನಪದ ನಂಬಿಕೆಗಳು (ಇತರರೊಡನೆ–೧೯೭೨)

೩೨. ಕನ್ನಡ ಶಿಶುಪ್ರಾಸಗಳು (೧೯೭೨)

೩೩. ಜನಪದ ರಾಮಾಯಣ (ಇತರರೊಡನೆ–೧೯೭೩)

೩೪. ಜಾನಪದ ಸಂಕೀರ್ಣ (೧೯೭೪)

೩೫. ಜನಪದ ಸಾಹಿತ್ಯ ರೂಪಕಗಳು (೧೯೭೮)

೩೬. ಚಾಮಾಯಿ (೧೯೮೧)

೩೭. ಜಾನಪದ ಸಂಶೋಧನ (೧೯೮೧)

೩೮. ಜನಪದ ಆಟಗಳು (೨೦೦೧)

೩೯. ಜನಪದ ಮಹಾಭಾರತ ಸಮಾಲೋಚನೆ (೨೦೦೫)

**ಸಂಶೋಧನೆ**

೪೦. ಷಷ್ಟಿ ಸಂಪದ (೨೦೦೫)

**ಮಕ್ಕಳ ಸಾಹಿತ್ಯ**

೪೧. ಕುಮಾರರಾಮ (೧೯೭೮)

೪೨. ಕಂದನ ಕವನಗಳು (೧೯೭೮)

೪೩. ಆರು ಪ್ರಾಣಿಕಥೆಗಳು (೧೯೭೮)

**ಸಂಪಾದನೆ**

೪೪. ಬಿಎಂಶ್ರೀ : ನೂರರ ನೆನಪು (ಇತರರೊಡನೆ –೧೯೮೪)

೪೫. ಕೈಲಾಸಂ : ಬದುಕು ಬರಹ (ಇತರರೊಡನೆ –೧೯೮೫)

೪೬. ಮಾಸ್ತಿಯವರು ಮತ್ತು ಚಿಕವೀರರಾಜೇಂದ್ರ (ಇತರರೊಡನೆ –೧೯೮೫)

೪೭. ವಿನಯೋನ್ನತಿ (ಇತರರೊಡನೆ – ೧೯೮೫)

೪೮. ಕನ್ನಡ ಕವಿಗಳು ಕಂಡ ಮೈಸೂರು (೧೯೯೦)

೪೯. ಬೇಂದ್ರೆ ಸಾಹಿತ್ಯ ಸಮಾಲೋಚನೆ (೧೯೯೩)

೫೦. ಮಹಿಳಾ ಅಧ್ಯಯನದ ಆಯಾಮಗಳು (೨೦೦೮)

೫೧. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂ. ೫, ಭಾಗ ೨ (೨೦೦೮)

೫೨. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂ.೫, ಭಾಗ ೩ (೨೦೦೮)

